# ಎಲ್ ಎಲ್. ಬಿ.,

ಅಥವಾ

# ಇಪ್ಪತ್ತನೇ ಶತಮಾನ

ಎಂಬ

ಸಾಮಾಜಿಕ ಕಾದಂಬರಿಯು.

ಲೇಖಕ :

**ಬಿ. ಎಸ್. ರಾಮಚಂದ್ರಯ್ಯ**

ಪ್ರಾಥಮಿಕಶಾಲಾ ಮುಖ್ಯೋಪಾಧ್ಯಾಯ

**ಕುಪ್ಪಗಡ್ಡೆ.**

---



**ಪ್ರಥಮಾವೃತ್ತಿ - ೧೯೩೫.**



ಮುದ್ರಕ ವ ಪ್ರಕಾಶಕ :

**ಎ. ಆರ್. ಶಿವನಾಗಪ್ಪ,**

ಮಾಲಕ,

ವಾಗ್ವಿಲಾಸ ಪವರ ಪ್ರಿಂಟಿಂಗ ಪ್ರೆಸ್,

ಹುಬ್ಬಳ್ಳಿ.

# ಮುನ್ನುಡಿ.



ನಮ್ಮ ಕನ್ನಡನಾಡಿನಲ್ಲಿ ಕನ್ನಡ ಭಾಷಾಸೇವೆ ಮಾಡಲು ಅನೇಕರು ಮುಂದುವರಿಯುತ್ತಿರುವುದು ಸ್ತುತ್ಯವಾದ ವಿಷಯ ಈ ಪುಸ್ತಕದಲ್ಲಿ ಈಗಿನ ಕಾಲದ ಸ್ತ್ರೀವಿದ್ಯಾಭ್ಯಾಸದ ವಿಷಯವಾದ ಒಂದು ಸಾಮಾಜಿಕ ಚಿತ್ರವನ್ನು ಚಿತ್ರಿಸಿದೆ. ಶ್ರೀ|| ರಾ|| ರಾಮಚಂದ್ರಯ್ಯನವರು ಗ್ರಂಥ ರಚನೆಯಲ್ಲಿ ಮೊದಲಿಗರಾಗಿದ್ದರೂ ಇದರಲ್ಲಡಗಿರುವ ವಸ್ತುವಿಶೇಷ ಕಲ್ಪನೆಯನ್ನು ಸ್ವಾರಸ್ಯವಾಗಿ ಬಣ್ಣಿಸಿರುವರು ಸ್ತ್ರೀಯರು ನಿರ್ದುಷ್ಟವಾದ ನೀತಿಯುಕ್ತವಾದ ಮತ್ತು ಗೃಹಿಣೀಧರ್ಮಕ್ಕೆ ಉಪಯುಕ್ತವಾದ ವಿದ್ಯೆಯನ್ನೇ ಕಲಿಯಬೇಕೆಂದೂ ತೋರಿಸಿಕೊಡಬೇಕೆಂಬ ಉದ್ದೇಶವನ್ನೇ ಗುರಿಯಾಗಿಟ್ಟುಕೊಂಡು ಬರೆದಿರುವರು.

ದೇಶದ ಏಳ್ಗೆಗೆ ಸ್ತ್ರೀಯರೇ ಕಾರಣಕರ್ತರು. ಅವರಿಂದ ಮುಂದೆ ಉತ್ಪನ್ನವಾಗಬಹುದಾದ ಸಂತಾನವೇ ದೇಶದ ಮೂಲಬಲ. ಈ ಮೂಲಬಲವನ್ನು ಹೇಗೆ ಅಭಿವೃದ್ಧಿಪಡಿಸಬೇಕೆಂಬುದನ್ನು ಸ್ತ್ರೀಯರು ಬಾಲ್ಯದಿಂದಲೂ ಅಭ್ಯಾಸ ಮಾಡಬೇಕು. ಇದಕ್ಕಾಗಿ ನಮ್ಮ ಆರ್ಯಮಹಿಳೆಯರಿಗೆ ನಿರ್ದುಷ್ಟವಾದ ವಿದ್ಯಾಭ್ಯಾಸವು ಅತ್ಯಾವಶ್ಯಕ ಈಗಿನ ಕಾಲದ ವಿದ್ಯಾಭ್ಯಾಸವು ಸ್ತ್ರೀಯರಿಗೆ ಉಚಿತವಾಗಿಲ್ಲ. ಉತ್ತಮವಾದ ಗೃಹಿಣಿಯಾಗುವುದಕ್ಕೆ ಯಾವವಿಧದ ವಿದ್ಯಾಭ್ಯಾಸವು ನಡೆಯಬೇಕೋ ಅದಕ್ಕೆ ವಿರುದ್ಧವಾದ ಶಿಕ್ಷಣವು ಈಗ ದೊರೆಯುತ್ತಿರುವುದು. ಸಾಧ್ಯವಾದ ಮಟ್ಟಿಗೆ ಈ ತೊಂದರೆಯನ್ನು ತಪ್ಪಿಸಬೇಕೆಂಬ ಉದ್ದೇಶದಿಂದಲೇ ಈ ಪುಸ್ತಕವು ಹೊರ ಹೊರಟಿದೆ ಎಂದು ಹೇಳಬಹುದು.

ಇದರಲ್ಲಿ ಬರುವ ಪಾತ್ರಗಳಲ್ಲಿ ವೆಂಕಟರಾಯನ ವಿದ್ಯಾಭ್ಯಾಸ-ದಾರಿದ್ರ್ಯ. ಇವುಗಳ ವರ್ಣನೆಯೂ ಈತನ ಸದ್ಗುಣಗಳೂ ವಾಚಕವರ್ಗದವರಿಗೆ ಸುಶ್ರಾವ್ಯವಾಗಿವೆ. ನಿರ್ಮಲೆಯ ನೂತನ ವಿದ್ಯಾಭ್ಯಾಸ, ಅದರಿಂದ ಉಂಟಾದ ಮೂರ್ಖತೆ ಕಡೆಗೆ ಪಶ್ಚಾತ್ತಾಪ, ಇವೇ ಮುಂತಾದ ವಿಷಯಗಳು ಹೃದಯದ್ರಾವಕವಾಗಿವೆ.

ವಾಚಕ ಮಹಾಶಯರು ಈ ಪುಸ್ತಕವನ್ನೋದಿ ತಮ್ಮ ಗಂಡು ಹೆಣ್ಣು ಮಕ್ಕಳ ಅಭಿವೃದ್ಧಿಯ ವಿಷಯದಲ್ಲಿ ಮುಂದೆ ಯಾವರೀತಿಯಲ್ಲಿ ನಡೆದುಕೊಳ್ಳಬೇಕೆಂಬುದನ್ನು ವಿಚಾರಿಸಿ ತಿಳಿದು ಅವರವರಿಗುಚಿತವಾದ ವಿದ್ಯೆಯನ್ನು ಕಲಿಸಿ, ಸನಾತನಾರ್ಯಧರ್ಮದ ನಿಜವಾದ ತತ್ತ್ವವನ್ನು ಮುಂದಿನ ಜನಾಂಗವಾಗುವ ತಮ್ಮ ಮಕ್ಕಳಿಗೆ ತಿಳಿಸುವದರ ಮೂಲಕ ದೇಶಾಭಿವೃದ್ಧಿಗೆ ಸಹಾಯಕರಾಗಲೆಂದು ಅಪೇಕ್ಷಿಸುವೆನು. ಕನ್ನಡ ಭಾಷಾಭಿಮಾನಿಗಳೆಲ್ಲರೂ ಈ ಪುಸ್ತಕಕ್ಕೆ ಹೆಚ್ಚು ಪ್ರೋತ್ಸಾಹವನ್ನು ಕೊಡುವರೆಂದು ಭಾವಿಸುವೆನು.

**ಆನವಟ್ಟಿ,**
೧೧-೬-೧೯೩೫.

**ಮೂಗೂರು ಹನುಮಂತಾಚಾರ್ಯ,**
( ಮುಖ್ಯೋಪಾಧ್ಯಾಯ )
'ಆನಂದಸಾಮ್ರಾಜ್ಯ' 'ಅಮೀನಾ'
ಇತ್ಯಾದಿ ಗ್ರಂಥಕರ್ತ.

## ಪೀಠಿಕೆ.

ಕರ್ನಾಟಕ ಮಾತೆಯ ಸೇವೆಯನ್ನು ಮಾಡುವ ಹಿರಿದಾದ ಹಂಬಲಿಕೆ ಯಿಂದ ನಾನು ಈ ಕಿರಿದಾದ ಸಾಮಾಜಿಕ ಕಾದಂಬರಿಯನ್ನು ಬರೆದಿರುವೆನು. ಇದರಲ್ಲಿ ಅನೇಕ ಪರಭಾಷೆಯ ಶಬ್ದಗಳೂ ಮತ್ತು ಮುದ್ರಣ ಸ್ಖಾಲಿತ್ಯಗಳೂ ಇರಬಹುದು. ಅವನ್ನು ಗ್ರಹಿಸದೆ, ವಿಷಯ ವಿವೇಚನವನ್ನು ಆದರಿಸಿ, ಕನ್ನಡ ಭಾಷೆಯ ಸೇವೆಗೆ ನನ್ನನ್ನು ಪ್ರೋತ್ಸಾಹ ಗೊಳಿಸಬೇಕಾಗಿ ಪ್ರಾರ್ಥನೆ.

ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದುಕೊಟ್ಟ ಮ. ರಾ. ಮೂಗೂರು ಹನುಮಂತಾಚಾರ್ಯರವರಿಗೆ ನನ್ನ ವಂದನೆಗಳನ್ನು ಅರ್ಪಿಸುತ್ತೇನೆ.

ಮುದ್ರಣ ಕಾರ್ಯಕ್ಕೆ ಅತ್ಯಾವಶ್ಯಕವಿದ್ದ ಅನೇಕ ಸಲಹೆಗಳನ್ನು ಕೊಟ್ಟ ನನ್ನ ಬಾಲಮಿತ್ರ S. S ಬಲಿ, ಮಾಸ್ತರ, ಬನವಾಸಿ ಇವರಿಗೆ ದೇವರು ಸುಖವನ್ನೀಯಲಿ!

ಹುಬ್ಬಳ್ಳಿಯ ವಾಗ್ವಿಲಾಸ ಛಾಪರ ಪ್ರಿಂಟಿಂಗ್ ಪ್ರೆಸ್ ಮಾಲಕರಾದ, ಮ. ರಾ. ಶ್ರೀ. ಎ. ಆರ್. ಶಿವನಾಗಪ್ಪನವರು ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಬಗ್ಗೆ ನಾನು ಅವರಿಗೆ ಚಿರಋಣಿಯಾಗಿರುವೆನು. ದೇವರು ಸರ್ವರಿಗೂ ಸುಖಕೊಡಲಿ.

ಜೂನ್ ೧೯೩೫ನೇ ಇಸ್ವಿ,
**ಕುಪ್ಪಗಡ್ಡೆ.**

ವಿದ್ವಜ್ಜನರ ಅಡಿಯಾಳು,
B. S. **ರಾಮಚಂದ್ರಯ್ಯ.**

Checked 1969

ಕವನರೂಪವಾದ ಗದ್ಯ. (ರಗಳೆ)

ಕರ್ನಾಟಕ ಮಾತೆಯು,

ಶ್ರೇಷ್ಠ ಪುತ್ರನಹ,

ಶ್ರೀಕೃಷ್ಣ ನೃಪನ,

ಕಿಂಕರನು ರಚಿಸಿಹ,

ಭಾಷಾಸೇವೆಯ ಹಂಬಲದಿ **ಎಲ್‌ಎಲ್. ಬಿ.,** ಕಾದಂಬರಿಯ,

ಸುಜನರು ತಿದ್ದಿಕೊಳ್ಳುದು,

ಹಂಸಕ್ಷೀರ ನ್ಯಾಯದಿ,

ಸಾರವ ಗ್ರಹಿಸುತ,

ನಿಸ್ಸಾರವ ತ್ಯಜಿಸುತ.

ವಿದ್ವಜ್ಜನರ ಅಡಿಯಾಳು,

**ಬಿ. ಎಸ್. ರಾಮಚಂದ್ರಯ್ಯ.**

# ಎಲ್ ಎಲ್. ಬಿ.,

## ಅಥವಾ

# ಇಪ್ಪತ್ತನೆಯ ಶತಮಾನ.



## ೧ನೆಯ ಪರಿಚ್ಛೇದ.

### ಒಂದೇ ವರುಷ !

ಒಂದೇ ವರುಷದಲ್ಲಿ ನನ್ನ ಜೀವಿತವು ಮುಗಿಯುವುದಲ್ಲವೆ !! ಈ ಮಾತುಗಳು ವೆಂಕಟರಾಯರ ಬಾಯಿಂದ ಹೊರಬಿದ್ದವು. ಅವರು ಡಾಕ್ಟರು ಕಾಮತರವರ ದವಾಖಾನೆಯಿಂದ ಹೊರಹೊರಟಿದ್ದರು. ವೆಂಕಟರಾಯರ ವಯಸ್ಸು ಅಷ್ಟೇ- ಇಪ್ಪತ್ನಾಲ್ಕು ವರ್ಷವಾಗಿತ್ತು. ಆದರೂ ಅವರ ಶರೀರವು ಕೇವಲ ಬಡವಾಗಿತ್ತು. ಮತ್ತು ಮುಖವನ್ನು ನೋಡಿದರೆ ಇವರು ಮುದುಕರಿರಬಹುದೆಂಬಂತೆ ತೋರುತ್ತಿತ್ತು. ಆದರೆ ಅವರ ತಲೆಯಲ್ಲಿರುವ ಕೂದಲು ಕಪ್ಪಗಿರುವುದರಿಂದ ಆವರ ಅನುಮಾನವು ದೂರವಾಗುವದು ಮತ್ತು ಲಕ್ಷ್ಯಕೊಟ್ಟುನೋಡಿದರೆ, ನಿರಾಶೆಯಿಂದಲೂ ಸಂಪಾದನೆಯಿಲ್ಲದಿರುವುದರಿಂದಲೂ ಈ ರೀತಿಯಾಗಿರುವುದು ನಿಜವೆಂದು ಕಾಣುತ್ತಿತ್ತು. ನಿಜವಾಗಿ ಅವರ ಸ್ಥಿತಿಯೂ ಹಾಗಿತ್ತು.

ಅವರ ಹಿರಿಯರು ಇಂಜನೀಯರ ಇಲಾಖೆಯಲ್ಲಿ ದೊಡ್ಡ ನೌಕರಿಯಲ್ಲಿದ್ದರು. ಹೊಸಯಂತ್ರಗಳನ್ನು ಶೋಧಿಸುವುದರಲ್ಲಿ ಅವರಿಗೆ ತುಂಬಾ ಪರಿಶ್ರಮವಿತ್ತು, ಮತ್ತು ಸಣ್ಣಪುಟ್ಟ ಎರಡು ಮೂರು ಯಂತ್ರಗಳನ್ನು ತಯಾರಿಸಿದ್ದರು. ಕೆಲಸದ ಹೊತ್ತಿನಲ್ಲಿ ಕೆಲಸಮಾಡಿ ಉಳಿದ ಕಾಲದಲ್ಲಿ ಯಂತ್ರದ ಶೋಧನವನ್ನು ಮಾಡಲಾಗುತ್ತಿರಲಿಲ್ಲವಾದಕಾರಣ ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದರು. ಜಪಾನ ದೇಶದಲ್ಲಿರುವಂತೆ ನಮ್ಮ ದೇಶದಲ್ಲಿ ಸಣ್ಣಸಣ್ಣ ಮನೆ ಕೈಗಾರಿಕೆಗಳನ್ನು ಪ್ರಾರಂಭಮಾಡಿದ ಹೊರತು ಈ ದೇಶದ ದಾರಿದ್ರ್ಯವು ಹೋಗುವಹಾಗಿಲ್ಲವೆಂಬುದನ್ನು ಚನ್ನಾಗಿ ಬಲ್ಲವರಾಗಿದ್ದರು. ಹೊಸಹೊಸ ವಸ್ತುಗಳನ್ನು ತಯಾರಿಸಲು ಪರದೇಶದಿಂದ ಯಂತ್ರಸಾಮುಗ್ರಿಗಳನ್ನು ತರಿಸಿ, ಅವರಿಂದ ಸಾಮಾನು ತಯಾರಿಸುವುದರಿಂದ ಪ್ರಯೋಜನವಿಲ್ಲ ಸ್ಥಳದಲ್ಲಿಯೇ ಯಂತ್ರಗಳನ್ನು ತಯಾರಿಸಬೇಕೆಂಬ ಮಹತ್ವಾಕಾಂಕ್ಷೆಯು ಬಹಳವಿತ್ತು. ಅದರಲ್ಲೂ ಪರದೇಶದಿಂದ ಬರುವ ವಸ್ತುಗಳಲ್ಲಿ ಬಟ್ಟೆಯು ಮುಖ್ಯವಸ್ತುವಾಗಿತ್ತು. ಕಾರಣ ಮೊದಲು ನೂಲು ತೆಗೆಯುವ ಒಂದು ಯಂತ್ರವನ್ನು ಕಂಡುಹಿಡಿಯಬೇಕೆಂದು ಅವರು ಸಂಕಲ್ಪಮಾಡಿದರು. ಅದರಂತೆ ಅವರ ಆಯುಷ್ಯದಲ್ಲಿ ಬಹಳಕಾಲ ಕಳೆಯಿತು. ಅಷ್ಟರೊಳಗೆ ನೌಕರಿಯಿಂದ ಸಂಪಾದಿಸಿದ ನಾಲ್ಕುಕಾಸುಗಳೂ ಖರ್ಚಾಗಿ ಹೋದವು. ಅಲ್ಲದೆ ಮೇಲೆ ಸಾಲವೂ ಆಯಿತು. ಈ ಯಂತ್ರಗಳ ತಂಟೆ ಬಿಡಬೇಕಾಗಿಯೂ ಈ ರೀತಿ ಯಂತ್ರಶೋಧೆಯ ಹುಚ್ಚಿನಿಂದ ನಿಮ್ಮ ಸಂಸಾರವನ್ನೇ ಅಧೋಗತಿಗೆ ತರುತ್ತೀರಾಗಿಯೂ ಅವರ ಇಷ್ಟಮಿತ್ರರೂ ಸ್ನೇಹಿತರೂ ತಿಳಿಸಿ ಹೇಳಿ, ಈ ಹವ್ಯಾಸ ಬಿಡಬೇಕಾಗಿ ಬೇಡಿಕೊಳ್ಳುತ್ತಿದ್ದರು. ಆದರೆ ಜನರ ಹೇಳಿಕೆಯಿಂದ ಅವರ ಮನೋನಿಶ್ಚಯವು ಬದಲಾಗಲಿಲ್ಲ. ನೌಕರಿಯಲ್ಲಿರುವಕಾಲದಲ್ಲಿ ಅವರ ಸಂಸಾರವು ಸುಖವಾಗಿ ನಡೆಯುತ್ತಿತ್ತು. ಬಡತನದ ಸಂಗತಿಯೇ ತಿಳಿಯದಂತೆ ಇತ್ತು. ಆದರೂ ಅವರಿಗೆ ತಾವು ಮಾಡುತ್ತಿರುವ ಕೆಲಸವು ಕೈಗಾರಿಕೆಯನ್ನು ಅಭಿವೃದ್ಧಿಪಡಿಸುವ ಮಾರ್ಗವಾಗಿರುವುದು; ಮತ್ತೆ ಇದರಿಂದ ನಮ್ಮ ದೇಶಬಾಂಧವರ ಉನ್ನತಿಯಾಗಬೇಕು, ಅವರಿಗೆ ಕೆಲಸ ಕಾರ್ಯಗಳು ಸಿಗಬೇಕು, ಮತ್ತು ಅವರ ಐಶ್ವರ್ಯ ಬೆಳೆಯಬೇಕು. ಈ ಶ್ರೇಷ್ಠ ಹೇತುವಿನಿಂದ ಅವರು ತಮ್ಮ ತನು-ಮನ-ಧನ ಮತ್ತು ತಮ್ಮ

ಕಾಲ ಇವುಗಳನ್ನು ಖರ್ಚುಮಾಡುತ್ತಿರುವುದು ಅವರ ಮನಸ್ಸಿಗೆ ಬಂದೊಡನೆ ಕೆಲಸದಲ್ಲಿ ಇನ್ನೂ ಉತ್ಸಾಹವು ಹೆಚ್ಚುತ್ತಿತ್ತು. ಕಾರಣ ಕೆಲಸವನ್ನು ಬಿಡಬೇಕೆಂದು ಹೇಳುವ ಅವಿಚಾರೀಜನರ ಹೇಳಿಕೆಯು ಅವರ ಮನಸ್ಸಿಗೆ ನಾಟುತ್ತಿರಲಿಲ್ಲ.

ವೆಂಕಟರಾಯರು ತುಂಬಾ ಬುದ್ಧಿವಂತರಾಗಿದ್ದರು. ಅವರಿಗೆ ಸೀಮೆಗೆ ಕಳುಹಿಸಿ ಯಂತ್ರಕಲೆಯಲ್ಲಿ ಪ್ರವೀಣರನ್ನಾಗಿ ಮಾಡಬೇಕೆಂದು ಅವರ ಹಿರಿಯರ ಆಲೋಚನೆಯಾಗಿತ್ತು. ನೌಕರಿ ಬಿಟ್ಟದ್ದರಿಂದ ಹಣದ ಅನುಕೂಲತೆಯಿಲ್ಲವಾಗಲು ಅವರ ಆಲೋಚನೆಯು ಕೊನೆಸೇರಲಿಲ್ಲ. ಆದರಲ್ಲೂ ಔದ್ಯೋಗಿಕ ಮಹಾವಿದ್ಯಾಲಯಕ್ಕಾದರೂ ಕಳಿಸುವಷ್ಟು ದುಡ್ಡಿನ ಅನುಕೂಲತೆ ದೊರೆಯದ್ದರಿಂದ ವೆಂಕಟರಾಯರು ವಾಙ್ಮಯದ ಅಭ್ಯಾಸವಾಗುವ ಮಹಾವಿದ್ಯಾಲಯಕ್ಕೆ ಹೋಗುವ ಪ್ರಸಂಗಬಂದಿತು.

ಬಹಳ ದಿವಸ ಯಂತ್ರಶೋಧನೆಯಲ್ಲಿ ಪ್ರಯಾಸಪಟ್ಟು ಅದರಲ್ಲಿ ಶ್ರೇಯಸ್ಸನ್ನು ಹೊಂದಿದರು. ಅವರ ಪರಿಶ್ರಮಕ್ಕೆ ತತ್ಕಾಲ ಯಾವ ಪ್ರತಿಫಲವೂ ದೊರೆಯುವಂತಿರಲಿಲ್ಲ. ಯಂತ್ರದ ಹೊಸ ನಮೂನೆಯನ್ನು ಅನೇಕ ಗಿರಣಿ ಮಾಲಕರಿಗೆ ತೋರಿಸಿದರು. ಅದು ಯಾರಿಗೂ ಸರಿದೋರಲಿಲ್ಲ. ಇಷ್ಟು ಸುಲಭತರದ ಮತ್ತು ಸಾದಾರೀತಿಯ ಯಂತ್ರವು ಒಂದುಸ್ಥಾನದಲ್ಲಿ ಹೇಗೆ ತಯಾರಾದೀತು? ಎಂದು ಕೆಲವರು ಅನ್ನುವರು. ಅದಕ್ಕೆ ತಗಲುವ ಖರ್ಚನ್ನು ಕೊಡುವುದಕ್ಕೆ ಯಾರಾದರೂ ಮುಂದೆ ಬರುವರೋ! ಅದೂ ಇಲ್ಲ.

ಹೊಸ ಯಂತ್ರವನ್ನು ತಯಾರಿಸಲುಬೇಕಾಗುವ ನಾಲ್ಕೈದು ಸಾವಿರ ರೂಪಾಯಿಗಳು ಅವರಲ್ಲಿರಲಿಲ್ಲ ಮತ್ತು ಹೊಸದಾಗಿ ಸಾಲವೂ ಸಿಗುವಂತೆ ಇರಲಿಲ್ಲ. ಯಂತ್ರದ ನಮೂನೆಯನ್ನು ಮಾಡಿ ಕೃತಿಯಲ್ಲಿ ತೋರಿಸಿದ ವಿನಃ ಗಿರಣಿಯವರ ಮನಸ್ಸಿಗೆ ಹತ್ತುವಹಾಗಿರಲಿಲ್ಲ. ಹಣದ ಅನಾನುಕೂಲದಿಂದ ಹಾಗೆಮಾಡಲು ಸಾಧ್ಯವಿರಲಿಲ್ಲ. ಆದರೂ ಕಾಲಾನಂತರದಮೇಲಾದರೂ ನನ್ನ ಹೊಸನಮೂನೆಯ ಯಂತ್ರವು ಲೋಕಾದರಕ್ಕೆ ಪಾತ್ರವಾಗುವದಾಗಿಯೂ ಅದರಿಂದ ಬಡವರ ಸೌಖ್ಯವಾಗುವದಾಗಿಯೂ ಮತ್ತು ತನಗೂ ಕೂಡ ಪ್ರತಿಫಲವು ದೊರೆಯಬಹುದೆಂದೂ ಅವರಿಗೆ ತುಂಬಾ ನಂಬಿಗೆಯಿತ್ತು. ಈ

ಉತ್ಸಾಹದಿಂದಲೇ ಯಂತ್ರದ ಒಂದು ನಕಾಶೆಯನ್ನು ಅವರು ತಯಾರಿಸಿದ್ದರು. ನಕಾಶೆಯ ಒಂದುಭಾಗದಲ್ಲಿ ಯಂತ್ರದ ಎದುರು ನೋಟದ ಚಿತ್ರವೂ, ಇನ್ನೊಂದುಕಡೆ ಯಂತ್ರದ ಪ್ರತಿಭಾಗದ ಚಿತ್ರವೂ ಬರೆಯಲ್ಪಟ್ಟಿದ್ದವು. ಅಲ್ಲದೆ ಯಾವಯಾವ ಭಾಗವು ಎಲ್ಲೆಲ್ಲಿಗೆ ಸೇರಬೇಕೋ ಅದನ್ನೂ ಅದರ ಕೆಲಸದ ಟಿಪ್ಪಣಿಯನ್ನೂ ಸಂಕ್ಷೇಪವಾಗಿ ಬರೆಯಲಾಗಿತ್ತು. ನಕಾಶೆಯಲ್ಲಿ ಬರೆದಿರುವುದನ್ನು ಪ್ರತಿದಿವಸವೂ ನೋಡುತ್ತ ಇರುವುದು ಅವರಿಗೆ ಒಂದು ಕೆಲಸವಾಗಿ ಹೋಗಿತ್ತು. ಎಂದಾದರೂ ಇದರಿಂದ ಪ್ರಯೋಜನ ಸಿಗಬಹುದೆಂದು ಮನಸ್ಸಿನಲ್ಲೇ ಸಂತೋಷಪಡುತ್ತಿದ್ದರು. ಆಗಾಗ ವೆಂಕಟರಾಯರಿಗೆ ನೋಡಿ, ಇತರರ ತಾಯಿ-ತಂದೆಗಳು ತಮ್ಮ ಮಕ್ಕಳಿಗೆ ಜಮೀನು ಅಥವಾ ನಗ-ನಾಣ್ಯಗಳನ್ನು ಮಾಡಿಡುತ್ತಾರೆ " ನಿನಗೋಸ್ಕರ ನಾನಾದರೋ ಈ ಹೊಸಯಂತ್ರದ ನಕಾಶೆಯನ್ನು ತಯಾರಿಸಿರುತ್ತೇನೆ. ಇದು ಯಾವ ಕಾಲದಲ್ಲಾದರೂ ನಿನ್ನ ಕಲ್ಯಾಣ ಮಾಡಬಹುದು. ಅಲ್ಲದೆ ನಿನ್ನ ಸಂಗಡ ಅನೇಕ ದೇಶಬಾಂಧವರಿಗೆ ಹೊಟ್ಟೆಯ ಪಾಠವನ್ನು ತೋರಿಸಿಕೊಟ್ಟೀತು. ಇದು ಒಂದು ಕಾಮಧೇನುವೆಂದು ತಿಳಿದಿರು ! " ಎಂದು ಹೇಳುತ್ತಿದ್ದರು.

ಆದರೆ ಈ ತರದ ಸೌಖ್ಯವನ್ನು ನೋಡುವುದು ವೆಂಕಟರಾಯರ ನಸೀಬದಲ್ಲಿ ಬಹಳ ದಿವಸದವರೆಗೂ ಇರಲಿಲ್ಲ. ಯಂತ್ರದ ನಕಾಶೆಯು ತಯಾರಾದ ಐದಾರು ತಿಂಗಳಲ್ಲೇ ಅವರ ಯಜಮಾನರು ಪರಲೋಕವಾಸಿಯಾದರು

ಆ ಸಮಯದಲ್ಲಿ ವೆಂಕಟರಾಯರು ಎರಡನೇ ವರ್ಷದ ಎಲ್‌ಎಲ್. ಬಿ ಯಲ್ಲಿದ್ದರು. ಪರೀಕ್ಷೆಗೆ ಇನ್ನು ಆರೇತಿಂಗಳು ಮಾತ್ರ ಇತ್ತು. ಯಜಮಾನರಿದ್ದಾಗ ಹಣವು ಸರಾಗವಾಗಿ ಬರುತ್ತಿರಲಿಲ್ಲ. ಯಾಕೆಂದರೆ—ಈಚೆಗೆ ಸಂಸಾರಕ್ಕೆ ಸಾಲಮಾಡಬೇಕಾಗುತ್ತಿತ್ತು, ಆದರ ಜೊತೆಗೆ ಹೇಗೋಮಾಡಿ ಅವರು ನನ್ನ ಖರ್ಚಿಗೆ ಹಣ ಕಳಿಸಿಕೊಡುತ್ತಿದ್ದರು. ಈಗ ಅವರು ತೀರಿಕೊಂಡದ್ದರಿಂದ ಸಂಸಾರದ ಭಾರವು ಅವರ ಮೇಲೆ ಆಕಸ್ಮಾತ್ತಾಗಿ ಬಂದೊದಗಿತು. ಸಂಸಾರವಾದರೂ ದೊಡ್ಡದಿರಲಿಲ್ಲ. ಅವರ ತಾಯಿಮಾತ್ರ ಮನೆ ಯಜಮಾನರಾಗಿದ್ದರು. ದುಡ್ಡಿನ ಅನಾನುಕೂಲದಿಂದ ಲಗ್ನವಾಗಿರಲಿಲ್ಲ. ಇದೊಂದು ಅವ

ರಿಗೆ ಒಳ್ಳೆಯದೇ ಆಗಿತ್ತು. ಇಬ್ಬರ ಖರ್ಚಿಗಾದರೂ ಬೊಂಬಾಯಿಯಂಥ ಊರಲ್ಲಿ ನಲವತ್ತು ರೂಪಾಯಿ ಬೇಕಾಗುತ್ತಿತ್ತು. ಇದಲ್ಲದೆ ಕಾಫಿ, ತಿಂಡಿ, ಸ್ಕೂಲು ಫೀ, ಪುಸ್ತಕದ ಖರ್ಚು ಇಷ್ಟಲ್ಲದೆ ಪರೀಕ್ಷೆಯ ಫೀಜು, ಆಟದ ಫೀಜು ಇವೆಲ್ಲಾ ಬೇರೆ. ಒಟ್ಟು ತಿಂಗಳಿಗೆ ಕಮ್ಮಿ ಎಂದರೂ ಅರವತ್ತು ರೂಪಾಯಿ ಬೇಕಾಗುತ್ತಿತ್ತು. ಈ ಕಾರಣಗಳಿಂದ ಎಲ್ಎಲ್, ಬಿ., ಅಭ್ಯಾಸವನ್ನು ಬಿಡಬೇಕೆಂಬ ಆಲೋಚನೆ ಒಂದು ಸಾರೆ ಬರುವದು. ಪುನಃ ಮತ್ತೊಮ್ಮೆ ಹೇಗಾದರೂಮಾಡಿ ಇನ್ನು ಆರು ತಿಂಗಳು ಕಾಲಕಳೆದರೆ ಯಾವದಾದರೂ ಒಂದು ಉದ್ಯೋಗ ದೊರೆಯಬಹುದು; ಇಲ್ಲವೆ ವಕೀಲಬೋರ್ಡು ಹಾಕಬಹು ದೆಂಬ ಆಶೆಬೇರೆ. ಅಂತೂ ಓದುವ ಮನಸ್ಸನ್ನೇ ಗಟ್ಟಿಮಾಡಿದರು. ಅದಕ್ಕೆ ಸರಿಯಾಗಿ ಅವರ ಸ್ನೇಹಿತನೊಬ್ಬನು ಒಂದು ಇಂಗ್ಲಿಷ ಶಾಲೆಯಲ್ಲಿ ತಿಂಗಳಿಗೆ ಮೂವತ್ತು ರೂಪಾಯಿಯ ಉಪಾಧ್ಯಾಯ ಕೆಲಸವನ್ನು ದೊರಕಿಸಿಕೊಟ್ಟನು. ಮೂವತ್ತು ರೂಪಾಯಿಂದ ಕೆಲಸ ನಡೆಯುವಂತಿರಲಿಲ್ಲ. ಅದರೂ ದೊರೆ ತಷ್ಟಕ್ಕೇ ಸಂತೋಷಪಟ್ಟು ಸ್ವಲ್ಪ ಹಣ ಸಾಲ ತೆಗೆದು ಹಾಗೆಹೀಗೆ ಮಾಡಿ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದರು. ಮತ್ತು ಯಾವ ಊರಲ್ಲಿ ಕೆಲಸಕ್ಕೆ ಪ್ರಾರಂಭಿಸಬೇಕೆಂಬ ಆಲೋಚನೆ ಹತ್ತಿತು. ಯಾವುದೋ ಒಂದು ನಾಟ ಕದಲ್ಲಿ 'ಎಂಟಾಣೆಗೆ ಒಬ್ಬ ವಕೀಲರು' ಎಂಬುದನ್ನು ನೋಡಿದ್ದರು. ಅದರ ನೆನಪು ಈಗ ಆಗಲಾರಂಭಿಸಿತು. ಹಿಂದೆ ಆಲೋಚಿಸಿದ್ದೆಲ್ಲಾ ಮನೋರಾಜ್ಯ ವಾಗಿ ಹೋಯಿತು. ಈಗಲೂ ಸ್ಥಳವು ನಿರ್ದಿಷ್ಟವಾಗಲಿಲ್ಲ. ಅದರಲ್ಲೂ ಸಾಲಗಾರರ ಕಾಟ ಹೆಚ್ಚಾದುದರಿಂದ ಏನು ಮಾಡಬೇಕೆಂಬದು ತೋಚದೆ ಹೋಯಿತು. ಕೊನೆಗೆ ಮದರಾಸಿನಲ್ಲಿ ಪ್ರಸಿದ್ಧಿಹೊಂದಿದ ಸುಬ್ರಾಯರು ವಕೀಲ, ಇವರಲ್ಲಿ ಕೆಲಸದ ಅನುಭವಕ್ಕೋಸ್ಕರ ಐವತ್ತು ರೂಪಾಯಿ ಸಂಬ ಳದ ಮೇಲೆ ಗುಮಾಸ್ತೆ ಕೆಲಸಕ್ಕೆ ನಿಂತರು. ಈ ಕೆಲಸವನ್ನು ಅವರು ನಿರು ಪಾಯವಾಗಿ ಸ್ವೀಕರಿಸಬೇಕಾಯಿತು. ಹೊತ್ತು ಬಂದಂತೆ ನಡೆಯಲೇ ಬೇಕು; ಅದು ಯಾರಿಗೂ ಬಿಡದ ಕರ್ಮಫಲವು!

ಐವತ್ತು ರೂಪಾಯಿಯಿಂದ ಹ್ಯಾಗಾದರೂಮಾಡಿ ಸಂಸಾರ ನಡೆಯಿಸ ಬಹುದಾಗಿತ್ತು. ಆದರೆ ಸಾಹುಕಾರರ ಸಾಲತೀರುವ ಬಗೆಹೇಗೆ? ಅದ ಕ್ಕೋಸ್ಕರವಾಗಿ ಮನೆಯಲ್ಲಿ ಬಾಲಕರಿಗೆ ಪಾಠಹೇಳುವುದನ್ನು (ಪ್ರೈವ್ಹೇಟ್

ಟ್ಯೂಷನ್) ಗೊತ್ತುಮಾಡಿಕೊಂಡಿದ್ದರು. ಅವರಿಂದ ಇಪ್ಪತ್ತು-ಇಪ್ಪತ್ತೈದು ರೂಪಾಯಿಗಳು ಬರುತ್ತಿತ್ತು. ಸಾಹುಕಾರರಿಗೆ ಬಡ್ಡಿಯಹಣವನ್ನು ಹಾಗೂ ಹೀಗೂ ಮಾಡಿ ಇದರಿಂದ ಸಲ್ಲಿಸುತ್ತಿದ್ದರು. ಬಡ್ಡಿಯಹಣ ಸಲ್ಲುತ್ತಾ ಇದ್ದಕಾರಣ ಅವರ ಕಾಟ ಸ್ವಲ್ಪ ಕಡಿಮೆಯಾಗಿತ್ತು. ಆದರೆ ಅಷ್ಟರೊಳಗೆ ದೇವರು ಇವರಿಗೆ ಇನ್ನೊಂದು ಕಷ್ಟವನ್ನುಂಟುಮಾಡಿದನು. ಸಂಸಾರ ಪ್ರಾರಂಭವಾಗಿ ಅಷ್ಟೇ-ಮೂರುತಿಂಗಳಾಗಿತ್ತು, ಅವರ ಮಾತೃಶ್ರೀಯವರು ತೀರಿಕೊಂಡರು

ಮಾತೆಯ ಮರಣದಿಂದ ಅವರ ಮನಸ್ಸಿಗೆ ತುಂಬಾ ವ್ಯಥೆಯಾಯಿತು ಈಗ ಜಗತ್ತಿನಲ್ಲಿ ಅವರಿಗೆ ಪ್ರೀತಿಯವರೊಬ್ಬರೂ ಇಲ್ಲದಂತಾಯಿತು. ಮತ್ತು ವಿದ್ಯೆಯಿಂದಲೂ ಮುಂದೆ ತನ್ನ ಪರಿಣಾಮ ಸರಿಯಾಗಲಾರದೆಂದು ತೋರಿತು. ಮನಸ್ಸಿ ದುಡ್ಡು ಖರ್ಚುಮಾಡಿದ್ದಾಯಿತು. ಹಗಲು ರಾತ್ರಿಯನ್ನದೆ ಓದಿ ಓದಿ ಆರೋಗ್ಯ ಭಾಗ್ಯಕ್ಕೆ ಕುಂದು ತಂದುಕೊಂಡರು ವಕೀಲಿ ಪರೀಕ್ಷೆ ಪಾಸಾಗಿ ಮತ್ತೊಬ್ಬರಲ್ಲಿ ಗುಮಾಸ್ತೆ ಮಾಡುವ ಹೊತ್ತು ಬಂದಿದ್ದಕ್ಕೆ ತುಂಬಾ ದುಃಖವು ಉಕ್ಕೇರಿಬಂದು ಬಿಟ್ಟಿತು ಮತ್ತು ಅವರಿಗೆ ಎಲ್ಲಾ ಕಡೆಗೂ ನಿರಾಶೆಯೇ ಕಾಣಲಾರಂಭಿಸಿತು. ಮತ್ತು ಆಫೀಸಿನ ಕೆಲಸವನ್ನು ಹೇಗೋ ಮಾಡುತ್ತಿದ್ದರು. ಇದರ ದುಷ್ಪರಿಣಾಮವು ಮುಂದೆ ಅವರಿಗೆ ಆಗದೇ ಬಿಡಲಿಲ್ಲ.

ವೆಂಕಟರಾಯರ ದೇಹಸ್ಥಿತಿಯು ಮೊದಲೇ ಸೂಕ್ಷ್ಮವಾಗಿತ್ತು. ಅದರಲ್ಲೂ ವಿಶ್ವವಿದ್ಯಾಲಯದ ಅಭ್ಯಾಸದ ಪರಿಶ್ರಮ, ಅದರಲ್ಲೂ ದುಡ್ಡಿನ ತೊಂದರೆ ಬೇರೆ, ಮತ್ತು ಮನಸ್ಸಿನಂತೆ ಹಣಸಂಪಾದನೆಯಾಗದಿದ್ದುದು, ಸಾಲಗಾರರ ಕಾಟ ಬೇರೆ, ಮಾತೃಶ್ರೀಯವರ ಮರಣ, ಇವೆಲ್ಲವು ಸೇರಿದ್ದರಿಂದ ಬರಬರುತ್ತ ಅವರ ದೇಹವು ಕೇವಲ ಕ್ಷೀಣವಾಯಿತು. ಅವರ ದೇಹವನ್ನು ಅವರೇ ಕನ್ನಡಿಯಲ್ಲಿ ನೋಡಿಕೊಂಡರೆ ಅವರಿಗೆ ಹೆದರಿಕೆಯಾಗುವಂತೆ ಕಾಣುತ್ತಿತ್ತು. ಒಂದೊಂದುಸಾರೆ ಹೀಗೆಯೇ ಪ್ರಾಣವಾದರೂ ಹೋಗಬಾರದೇ ಎಂದು ದೇವರನ್ನು ಬೇಡಿಕೊಳ್ಳುತ್ತಿದ್ದರು. ಮತ್ತು ಸ್ವಲ್ಪ ಆನಂದವೃತ್ತಿಯಲ್ಲಿದ್ದಾಗ ಇದೇನು ಸ್ವಲ್ಪ ದಿನದಲ್ಲಿ ನನ್ನ ದೇಹಸ್ಥಿತಿಯು ಸುಧಾರಿಸಬಹುದೆಂಬ ಆಶೆ ಬೇರೆ. ಅದರಲ್ಲೂ ಒಮ್ಮೊಮ್ಮೆ ಪರಿಸ್ಥಿತಿ ಪರಿಸ್ಥಿತಿ ಎಂದರೇನು ನನ್ನ

ಇರುವಿಕೆಯು ಹೀಗೇ ಇದ್ದೀತೇ. ಸ್ವಲ್ಪ ದಿನದಲ್ಲಿ ದುಡ್ಡಿನ ಮಳೆಯನ್ನು ಸುರಿಸಿ, ಹಿರಿಯರಸಾಲ ತೀರಿಸಿಬಿಟ್ಟೇನೆಂಬ ಆಶಾಪೂರಿತ ವಿಚಾರಬರುತ್ತಿತ್ತು. ಹೀಗೆ ಆಲೋಚನೆ ಬರುವುದು ಮನುಷ್ಯನಿಗೆ ಸ್ವಭಾವ. ಮನುಷ್ಯನು ಯಾವಾಗಲೂ ಆಶಾವಾದಿಯಾಗಿರುತ್ತಾನೆ.

ತಮ್ಮ ಆರೋಗ್ಯವನ್ನುಂಟುಮಾಡಿಕೊಳ್ಳುವುದಕ್ಕೋಸ್ಕರ ಅವರು ಈಚೆಗೆ ಡಾಕ್ಟರ ನಾಯುಡು ಇವರಲ್ಲಿ ಔಷಧ ತೆಗೆದುಕೊಳ್ಳಲು ಪ್ರಾರಂಭಿಸಿದ್ದರು. ಡಾಕ್ಟರರು ತುಂಬಿತುಂಬಿ ಕೊಟ್ಟ ಔಷಧ ಶೀಸೆಗಳನ್ನು ಅವರು ನಿಯಮ ಪ್ರಕಾರ ಹೊಟ್ಟೆಗೆ ತುಂಬಿದರು. ಅದರಿಂದ ಯಾವಪ್ರಯೋಜನವೂ ಕಂಡುಬರಲಿಲ್ಲ. ಅದಕ್ಕೆ ಪ್ರತಿಯಾಗಿ ಅವರ ಪ್ರಕೃತಿಯು ಬರಬರುತ್ತಾ ಕ್ಷೀಣವಾಗುತ್ತಬಂತು. ಔಷಧಿ ತೆಗದುಕೊಳ್ಳುತ್ತಾ ಇದ್ದರೂ ಬರಬರುತ್ತಾ ಅವರ ಶರೀರವು ಕ್ಷೀಣವಾಗುವುದನ್ನು ನೋಡಿ ಡಾಕ್ಟರರು ನಾಚಿಯಾಗಿ ನೀವು ಡಾಕ್ಟರ ಕಾಮತರವರ ಸಲಹೆ ತೆಗೆದುಕೊಳ್ಳಬೇಕೆಂದು ಒತ್ತಾಯ ಪಡಿಸಿದರು. ಸುಮಾರು ಮೂರು ತಿಂಗಳುಗಳಿಂದ ಔಷಧಿಕೊಟ್ಟರೂ ಡಾಕ್ಟರರಿಗೆ ರೋಗದ ಪರಿಚಯವೇ ಹತ್ತಲಿಲ್ಲ.

ನಾಯುಡು ಡಾಕ್ಟರರ ಒತ್ತಾಯದಿಂದ ಈ ದಿನ ವೆಂಕಟರಾಯರು ಕಾಮತ ಡಾಕ್ಟರರಲ್ಲಿಗೆ ಹೋಗಿದ್ದರು. ಡಾಕ್ಟರರು ಶಾಂತತನದಿಂದ ಅವರ ಎಲ್ಲ ಸಂಗತಿಗಳನ್ನೂ ಕೇಳಿ, ತಿಳಿದುಕೊಂಡು, ಅಂಗಪರೀಕ್ಷೆಯನ್ನು ಚನ್ನಾಗಿ ಮಾಡಲಾಗಿ ಒಂದು ವಾಯುಕೋಶದಲ್ಲಿ ವ್ಯತ್ಯಾಸವು ಆಗಿ ಅದು ಕೆಟ್ಟಂತೆ ತಿಳಿಯಿತು. ಮತ್ತು ಉಪಚಾರ ಔಷಧಿಗಳು ಸರಿಯಾಗಿ ನಡೆಯದಿದ್ದರೆ ವರ್ಷದೊಳಗೆ ಕ್ಷಯಕ್ಕೆ ಬೀಳಬಹುದಾಗಿಯೂ ಮತ್ತು ಒಂದು ವರ್ಷದ ಮಟ್ಟಿಗೂ ಕೂಡ ಬದುಕುವ ಭರವಸೆಯಿಲ್ಲವೆಂಬುದಾಗಿಯೂ ಕಾಣಿಸಿತು. ಆದರೂ ರೋಗಿಯ ಸಮಾಧಾನಕ್ಕಾಗಿ ಬಹಳ ವಿಚಾರಮಾಡಿ ಔಷಧಿಯ ಯಾದಿಯೊಂದನ್ನು ತಯಾರಿಸಿಕೊಟ್ಟು, ಔಷಧಿಯಲ್ಲಿ ಹೆಚ್ಚು ಕಡಿಮೆ ಮಾಡಬೇಡಿರಿ. ಕೊನೇಪಕ್ಷ ನೀವು ಒಂದು ವರ್ಷವಾದರೂ ಒಳ್ಳೇಹವೆಗೆ ಹೋಗಿ ಸಂಪೂರ್ಣ ವಿಶ್ರಾಂತಿ ತೆಗೆದುಕೊಂಡು ಊಟ ಉಪಚಾರಗಳಲ್ಲಿ ಪೌಷ್ಟಿಕ ಆಹಾರ ತೆಗೆದುಕೊಂಡು ನೇಮವಾಗಿರಿ. ಮತ್ತು ಸಾಯಂಕಾಲ ಬೆಳಿಗ್ಗೆ ಬಯಲಿನೆ ತಿರುಗಾಡಲು ಹೋಗಬೇಕು. ಅದರ ಹಿನಾ ಬೇರೊಂದು

ಕಷ್ಟದ ಕೆಲಸ ಮಾಡಬಾರದೆಂದೂ ಮತ್ತು ಈ ಔಷಧಿಯನ್ನು ಒಂದು ವರ್ಷದವರೆಗೂ ಸರಿಯಾಗಿ ತೆಗೆದುಕೊಳ್ಳಬೇಕು. ಇದರಲ್ಲಿ ಏನಾದರೂ ವ್ಯತ್ಯಾಸವಾದರೆ ಖಂಡಿತ ಗುಣವಾಗಲಿಕ್ಕಿಲ್ಲವೆಂದೂ; ಎಲ್ಲವನ್ನು ಸರಿಯಾಗಿ ತಿಳಿಸಿ ಹೇಳಿದರು.

ದುಡ್ಡಿನ ಅಡಚಣಿಯ ಮೂಲಕ ಒಳ್ಳೇಹವೆಯಲ್ಲಿ ಹೋಗಿರುವದು ಮತ್ತು ಕೆಲಸ ಬಿಡುವುದು ವಗೈರೆ ಕೆಲಸ ನಡಿಸುವುದು ಆಗದ ಮಾತೆಂದು ಡಾಕ್ಟರ ಮನೆಯಿಂದ ಹೊರಗೆ ಹೊರಟಕೂಡಲೆ ಡಾಕ್ಟರರ ನಿರಾಶೆಯ ಮಾತನ್ನು ಕೇಳಿ ಪ್ರಾರಂಭದಲ್ಲಿ ಬರೆದ ನಿರಾಶೆಯ ಉದ್ಗಾರವು ವೆಂಕಟರಾಯರ ಬಾಯಿಂದ ಹೊರಟಿದ್ದವು.

---

## ೨ನೆಯ ಪರಿಚ್ಛೇದ.

### ಮನೆಗೆ ಹೋದಮೇಲೆ

ಡಾಕ್ಟರಸಾಹೇಬರ ಅಭಿಪ್ರಾಯ ಕೇಳಿ ವೆಂಕಟರಾಯರ ಸೊಂಟವೇ ಮುರಿದಹಾಗಾಯಿತು. ಹೀಗೆ ಎಲ್ಲರಿಗೂ ಆಗತಕ್ಕಮಾತೇ ಅಲ್ಲವೆ? ಯಾಕೆಂದರೆ ಕಾಮತ ಡಾಕ್ಟರರೆಂದರೆ ಈ ಇಪ್ಪತ್ತನೆಯ ಶತಮಾನದಲ್ಲಿ ಮದ್ರಾಸ ಇಲಾಖೆಯಲ್ಲಿ ಪ್ರತಿ ಅಶ್ವಿನೀಕುಮಾರರು ಇದ್ದಂತೆಯೇಸರಿ.

ವೆಂಕಟರಾಯರು ವ್ಯಸನದಿಂದ ಒಂದೊಂದೇ ಹೆಜ್ಜೆ ಮುಂದಿಡುತ್ತ ಅವರು ತಮ್ಮ ಮನೆಗೆ ದಾರಿಹಿಡಿದರು. ಅವರು ಗಾಡಿಯನ್ನು ಮಾಡಲಿಲ್ಲ. ಟ್ರಾಂವೇದಲ್ಲಿಯೂ ಕೂಡ್ರಲಿಲ್ಲ. ಒಂದಾಣೆ ಉಳಿದರೆ ಅದನ್ನೇ ಸಾಲತೀರಿಸಲು ಉಪಯೋಗಿಸಬಹುದೆಂಬ ಆಲೋಚನೆಯಿಂದ ಹೀಗೆಮಾಡುತ್ತಿದ್ದರು.

ವಿಶ್ರಾಂತಿಗೋಸ್ಕರ ನಡುವೆ ಒಂದುಸಾರೆ ಕುಳಿತುಕೊಂಡರು. ಪುನಃ ಎದ್ದು ನಿಧಾನವಾಗಿ ಪ್ರಯಾಣಮಾಡುತ್ತಾ ಅನ್ನಪೂರ್ಣಾಗೃಹಕ್ಕೆ ಬಂದು ತಲ್ಪಿದರು. ಜೇಬಿನೊಳಗಿಂದ ಬೀಗದ ಕೈಯನ್ನು ತೆಗೆದು ಕೋಣೆಯ ಬಾಗಿಲನ್ನು ತೆಗೆದು ಟೋಪಿಯನ್ನು ಮೇಜಿನಮೇಲಿಟ್ಟು ಆರಾಮ ಖುರ್ಚಿಯ ಮೇಲೆ ಒರಗಿದರು.

ತಾಯಿ ಸತ್ತಲಾಗಾಯ್ತು ಭೀಮಾಬಾಯಿಯ ವಸತಿಗೃಹದಲ್ಲೇ ಇದ್ದರು. ಈ ಗೃಹದಲ್ಲಿ ಮನೆಯಂತೆಯೇ ಇರಲಿಕ್ಕೂ ಊಟಕ್ಕೂ ತುಂಬಾ ಅನುಕೂಲವಿತ್ತು. ಶಾಂತಿಸದನವೆಂಬ ಹೊಟಲಿಗಿಂತಲು ದರವೂ ಕಡಿಮೆಯಾಗಿತ್ತು. ಈ ಗೃಹವನ್ನು ಭೀಮಾಬಾಯಿಯು ವ್ಯಾಪಾರದ ಲಾಭದಮೇಲಿನ ಆಶೆಯಿಂದ ಇಟ್ಟಿರಲಿಲ್ಲ. ತನ್ನ ಗಂಡನು ತೀರಿಕೊಂಡಮೇಲೆ ಕೆಲವು ಅನಾನುಕೂಲತೆಯ ದೆಸೆಯಿಂದಲೂ ಮರ್ಯಾದೆಯಿಂದ ಕಾಲಕಳೆಯುತ್ತಾ ತನ್ನ ಎರಡೂಮಕ್ಕಳು ವಿದ್ಯೆಕಲಿತು ತನ್ನವರ ಹೊಟ್ಟೆಸಾಗಿದರೆ ಸಾಕೆಂದು ಈ ಊಟದ ಗೃಹವನ್ನು ಭೀಮಾಬಾಯಿಯು ಇಟ್ಟಿದ್ದರು, ಈ ಗೃಹದಲ್ಲಿ ಹತ್ತು-ಹನ್ನೆರಡು ಜನರು ಮಾತ್ರವೇ ಇದ್ದರು.

ವೆಂಕಟರಾಯರ ಕೋಣೆಯಲ್ಲಿನ ಸಾಮಾನುಗಳು ಬೆತ್ತದಿಂದಮಾಡಿದವುಗಳಾಗಿದ್ದವು. ಮತ್ತು ಯಾವುದರಲ್ಲಿಯೂ ಅವರ ಮನಸ್ಸು ಇಲ್ಲದುದರಿಂದ ಇದ್ದ ಸ್ವಲ್ಪ ವಸ್ತುಗಳು ಆ ಕಡೆ ಈ ಕಡೆ ಹರಡಿಬಿದ್ದಿದ್ದುವು. ವೆಂಕಟರಾಯರ ಗುರುತಿಲ್ಲದವರಿಗೆ ಆ ಕೋಣೆಯು ಸಾಮಾನಿನ ಕೋಣೆಯೆಂಬಂತೆ ತೋರುವಹಾಗಿತ್ತು.

ಸ್ವಲ್ಪಹೊತ್ತು ಅತ್ತಿತ್ತ ಹೊರಳಾಡಿದನಂತರ ಮನಸ್ಸಿಗೆ ಆನಂದವಾದಂತೆ ತೋರಿತು. ಯಾರಿಗಾದರೂ ಅಷ್ಟೆ! ಸಾಕಾದಾಗ ತಮ್ಮ ಸ್ವಂತಮನೆಗೆ ಹೋದರೆ ಮನಸ್ಸಿಗೆ ಸ್ವಲ್ಪ ಆನಂದವಾಗುವುದು. ಅದರಂತೆ ವೆಂಕಟರಾಯರಿಗೂ ಸ್ವಲ್ಪ ಸಮಾಧಾನವಾದುದರಲ್ಲಿ ಆಶ್ಚರ್ಯವಲ್ಲ.

ಸ್ವಲ್ಪಹೊತ್ತು ಕೋಣೆಯಲ್ಲಿ ಅತ್ತಿಂದಿತ್ತ ತಿರುಗಾಡಿದಮೇಲೆ ತಮ್ಮ ಮನಸ್ಸಿನಲ್ಲಿ, ದೇವರೆ ! ಕೊನೆಗೆ ಈ ಅವಸ್ಥೆಬಂತೇ ಡಾಕ್ಟರರ ಮಾತಿನಂತೆ ನನಗೆ ಉಪಚಾರಪಡೆಯಲು ಅನುಕೂಲಗಳಿಲ್ಲ. ಈ ಹತ್ತು ಫೂಟಿನ ಕೋಣೆ

ಯಲ್ಲಿ ಒಂದು ವರ್ಷದವರೆಗೆ ಮೃತ್ಯುದೇವತೆಯ ದಾರಿಯನ್ನು ಕಾಯುತ್ತಾ ಕೂಡ್ರಬೇಕಾಯಿತು. ದೇವರೇ, ಇದನ್ನೇ ನನ್ನ ಹಣೆಯಲ್ಲಿ ಬರೆದು ನನ್ನ ಕೊನೆಕಾಲವನ್ನು ತೀರಿಸಿರುವೆಯಾ ?

ಸಾವಿನ ದಾರಿಯನ್ನು ನೋಡನೋಡುತ್ತಾ ದುಃಖದಿಂದ ಕ್ಷೀಣಿಸಿ ಮರಣಪಡುವುದೇ ನನ್ನ ಹಣೆಬರಹವಾಗಿದ್ದರೆ ಈಗಲೇ ನನ್ನ ಪ್ರಾಣವು ಹೋದರೆ ಕೆಟ್ಟುಹೋದೇನು? ಅದನ್ನು ನಾನು ಪ್ರೀತಿಯಿಂದ ಸ್ವೀಕರಿಸುತ್ತಿದ್ದೆನಲ್ಲವೇ? ಛೀ! ಅದು ಹೇಗಾದೀತು? ಹಾಗಾದಪಕ್ಷದಲ್ಲಿ ನನ್ನ ಕರ್ಮಫಲವನ್ನು ಅನುಭವಿಸುವವರಾರು? ಮತ್ತು ಸಾಲಗಾರರ ಶೂಲವನ್ನೂ ಒಡೆಯನ ಹೇಳಿಕೆಯನ್ನೂ ಇಷ್ಟಮಿತ್ರರ ಅಪಹಾಸ್ಯದ ಮಾತುಗಳನ್ನೂ ಮತ್ತು ಈ ದೇಹದ ಕ್ಲೇಶಗಳನ್ನೂ ಅನುಭವಿಸುವವರು ಬೇರೆ ಯಾರಾದರೂ ಇರುವರೇ! ದೇವರೇ ಇಷ್ಟೊಂದು ಉಪಕಾರಮಾತ್ರ ಮಾಡು. ಒಂದೊಂದೇ ಕಷ್ಟಗಳನ್ನು ತಂದೊಡ್ಡುವುದಕ್ಕಿಂತಲೂ ಒಂದೇಸಾರೆ ಎಲ್ಲವನ್ನೂ ಸೇರಿಸಿ, ನನ್ನ ಇತಿಶ್ರೀ ಮುಗಿಸಿಬಿಡು! ಎಂಬುದೇ ನನ್ನ ಪ್ರಾರ್ಥನೆ.

ಅಕಸ್ಮಾತ್ ಅವರ ಲಕ್ಷ್ಯವು ಮೇಜಿನಕಡೆಗೆ ಹೋಯಿತು. ಅಲ್ಲಿ ಒಂದು ಕಾಗದದ ಸುರುಳಿ ಇರುವುದು ಕಣ್ಣಿಗೆಬಿತ್ತು.

ಕೂಡಲೆ ಮನಸ್ಸಿನ ಚಿಂತೆಯನ್ನು ಬಿಟ್ಟು, ಕಾಗದವನ್ನು ಬಿಚ್ಚಿನೋಡಲು ಅದು ತನ್ನ ಹಿರಿಯರು ಬರೆದ ಹೊಸ ನಮೂನೆ ಯಂತ್ರದ ನಕಾಶೆಯಾಗಿತ್ತು. ಸ್ವಲ್ಪಹೊತ್ತು ಆ ನಕಾಶೆಯಕಡೆಗೆ ನೋಡಿ ತಂದೆಯವರು ಈ ಕಾಗದವೆಂದರೆ ಕಾಮಧೇನುವೆಂದು ತಿಳಿದಿದ್ದರು. ಈ ಕಾಗದವನ್ನು ಯಾರಾದರೂ ವಿಕ್ರಯಕ್ಕೆ ತೆಗೆದುಕೊಳ್ಳುವ ಮಹಾನುಭಾವರು ಇರುವರೇ? ಎಂದು ಹಂಬಲಿಸುತ್ತಾ ಪ್ರಾಣವನ್ನು ಬಿಟ್ಟಿದರು. ಅವರಂತೆಯೇ, ಆಶೆಪಡುತ್ತಾ ಪಡುತ್ತಾ ನನ್ನ ಈ ಗ್ರಂಥವು ಮುಗಿಯಬಹುದೇ! ಆದರೆ ಮುಂದೆ ದೇವರ ಮನಸ್ಸಿನಲ್ಲಿ ಏನಿರುವುದೋ ಯಾರಿಗೆಗೊತ್ತು!

ಆ ನಕಾಶೆಯನ್ನು ನೋಡಿ ಅವರ ಮನಸ್ಸಿಗೆ ತುಂಬಾ ವ್ಯಸನವಾಯಿತು. ಮತ್ತು ಇತ್ತಿಂದತ್ತ ತಿರುಗಾಡಿ ಸಾಕಾದ್ದರಿಂದ ಮೇಜಿನ ಹತ್ತಿರವಿರುವ ಖುರ್ಚಿಯಮೇಲೆ ಹೋಗಿ ಕುಳಿತರು. ಮೇಜಿನಮೇಲೆ ಅದೇದಿವಸ ಬಂದ

**ಉದ್ಯೋಗವೆಂಬ ಮಾಸಿಕ ಪುಸ್ತಕವು ಇತ್ತು.** ಅವರ ಮುಖಪತ್ರದ ಮೇಲೆ ದಪ್ಪ ಅಕ್ಷರಗಳಿಂದ ಕೆಳಗೆ ಬರೆದಂತೆ **ಜಾಹಿರಾತುಗಳನ್ನೂ** ಕೆಲವು ಬೇರೆಬೇರೆ ನಮೂನೆಯ ಯಂತ್ರದ ಆಕೃತಿಗಳನ್ನೂ ಮುದ್ರಿಸಿದ್ದರು.

**ಜಾಹಿರಾತು.**

ಯಾವನಮೂನೆಯ ಎಷ್ಟಾದರೂ ಎಷ್ಟುಬೇಕಾದರೂ ಯಂತ್ರಗಳನ್ನು ಕೇಳುವಕಾಲದಲ್ಲಿ ಸರಿಯಾದ ವರಕ್ಕೆ ತಯಾರಿಸಿಕೊಡಲು ಈ ಕಂಪನಿಯು ಸಿದ್ಧವಿದೆ. ಬೇಸಾಯದ ಹೊಸ ಹೊಸನಮೂನೆ ಯಂತ್ರಗಳ ದೊಡ್ಡ ಸಂಗ್ರಹವಿದೆ. ಆವಶ್ಯಕರು ತ್ವರೆಮಾಡಿರಿ

**ಹೊಸ ಯಂತ್ರಗಳ ಶೋಧಮಾಡಿದವರಿಗೆ ಇನಾಮ !**

**ಶ್ರೀನಿವಾಸ ಮತ್ತು ಬಂಧುಗಳು, ಯಂತ್ರದಕಾರಖಾನೆದಾರ,**

ಹೌರಾ— ಕಲಕತ್ತಾ. P. B No. 1939

ಜಾಹಿರಾತಿನೊಳಗಿನ ಯಂತ್ರಗಳ ಆಕೃತಿ ನೋಡಿ, ಅವರಿಗೆ ಹೇಗಾಗಿರಬಹುದು ? ಇರಲಿ ! ಅದನ್ನು ಸುಮಾರು ಎರಡು ಮೂರು ಸಾರೆ ಓದಿದರು.

ಮಾಸಿಕ ಪುಸ್ತಕವನ್ನು ಬದಿಗಿಟ್ಟು ಮೇಜಿನ ಡ್ರಾವನ್ನು ಹೊರಗೆ ತೆಗೆದು ಕಾಗದ ಬರೆಯಲು ಒಂದು ನೋಟ-ಪೇಪರ ತೆಗೆದು ಕೈಯಲ್ಲಿ ಲೇಖಣಿ ಹಿಡಿದು ಪ್ರೀತಿಯಿಂದ ಮಸಿ ಅದ್ದಿ ಬರೆಯಲು ಪ್ರಾರಂಭಿಸುವಷ್ಟರಲ್ಲಿಯೇ ಅವರ ಕೋಣೆಯ ಬಾಗಿಲನ್ನು ಸಾವಕಾಶವಾಗಿ ಯಾರೋ ತೆರೆದರು.

ಅವರು ಹಿಂತಿರುಗಿ ನೋಡಲು ಬಂದವರು ಭೀಮುಬಾಯಿಯವರಾಗಿದ್ದರು. ಮತ್ತು ಅವರು ಕಾಫಿಯನ್ನು ತೆಗೆದುಕೊಂಡು ಬಂದಿದ್ದರು.

ಕಾಫಿಯ ಕಪ್ಪನ್ನು ಮೇಜಿನ ಮೇಲಿಟ್ಟು ವೆಂಕಟರಾಯರೇ ಬೇಗನೆ ಕಾಫಿ ತೆಗೆದುಕೊಳ್ಳಿರಿ. ಇಲ್ಲವಾದರೆ ಅದು ಆರಿಹೋಗಬಹುದು. ಮತ್ತು ಈಗಲೇ ಡಾಕ್ಟರ ಮನೆಯಿಂದ ಬಂದಿರುವುದರಿಂದ ಬಹಳ ಆಯಾಸವಾಗಿರಬಹುದು. ಅದೆಲ್ಲಾ ಕಾಫಿ ಕುಡಿಯುವುದರಿಂದ ಪರಿಹಾರವಾಗಬಹುದು, ಎಂದು ನಾನು ಕಾಫಿ ತಂದಿರುತ್ತೇನೆ. ಎಂದು ಭೀಮಾಬಾಯಿಯವರು ಹೇಳಿದರು.

ವೆಂಕಟರಾಯರು ಭೀಮಾಬಾಯಿಯವರ ಕಡೆ ಕೃತಜ್ಞತೆಯಿಂದ ನೋಡಿದರು. ಕಾಫಿಯನ್ನು ಕೇವಲ ಪರೋಪಕಾರಬುದ್ಧಿಯಿಂದಲೇ ಭೀಮಾಬಾಯಿಯವರು ತಂದಿದ್ದರು. ಯಾಕೆಂದರೆ ಹಣದ ಅಡಚಣೆಯಿಂದ ವೆಂಕಟರಾಯರು ಕಾಫಿ ಕುಡಿಯುವ ಪರಿಪಾಠವಿಟ್ಟಿರಲಿಲ್ಲ; ಹೀಗೆ ಮಾಡುವುದರಿಂದ ಖರ್ಚು ಕಡಿಮೆಯಾಗುತ್ತಿತ್ತು.

ಭೀಮಾಬಾಯಿಯವರು ಸ್ವಭಾವವಾಗಿ ಸುಶೀಲರೂ ಪ್ರೇಮಿಗಳೂ ಉದಾರಿಗಳೂ ಆಗಿದ್ದರು. ತಮ್ಮಲ್ಲಿ ಊಟ ಮಾಡುವವರಿಗೆ ಕೇವಲ ತಮ್ಮ ಮನೆಯವರಂತೆ ನೋಡಿಕೊಳ್ಳುತ್ತಿದ್ದರು. ಅದರಲ್ಲೂ ವೆಂಕಟರಾಯರ ಪ್ರಕೃತಿಯು ನೆಟ್ಟಗಿಲ್ಲದ್ದರಿಂದ ಅವರಮೇಲೆ ಭೀಮಾಬಾಯಿಯವರಿಗೆ ತುಂಬಾ ಸಿಗಾ ಇತ್ತು. ಯಾವಾಗಲಾದರೂ ಅನುಕೂಲವಾದಾಗ ಅವರು ಕಷ್ಟಸುಖಗಳನ್ನು ಮಾತಾಡಿ ವೆಂಕಟರಾಯರ ಸಮಾಧಾನ ಮಾಡುತ್ತಿದ್ದರು.

**ಭೀಮಾಬಾಯಿ:**—ಡಾಕ್ಟರರು ಜ್ವಾಯಿಲೆ ವಿಚಾರ ಏನೆಂದು ಅಭಿಪ್ರಾಯಪಟ್ಟರು? (ಎಂದು ಕೇಳಿ) ನಾನು ಈ ದಿನ ನಿಮ್ಮ ಪ್ರಕೃತಿಯ ವಿಚಾರವಾಗಿ ದಿನೇದಿನೇ ಹೆಚ್ಚುಕಡಿಮೆಯಾಗುವುದಾಗಿ ನಾರಾಯಣರಾಯರ ಹತ್ತಿರ ಹೇಳಿದೆ. ( ನಾರಾಯಣರಾಯರು ಅಲ್ಲೇ ಊಟಮಾಡುವವರಲ್ಲಿ ಒಬ್ಬರಾಗಿದ್ದಾರೆ. )

ಭೀಮಾಬಾಯಿಯವರ ಪ್ರಶ್ನೆಗೆ ಏನು ಹೇಳಬೇಕೆಂಬುದೇ ತಿಳಿಯದಾಗಲು ವೆಂಕಟರಾಯರು ವಿಚಾರಮಾಡುತ್ತ ಸುಮ್ಮನಾಗಿ (ಮನದೊಳಗೆ) ನನಗಂತೂ ಕ್ಷಯದ ವಿಕಾರವಾಗಿರುವಂತೆಯೂ ಹೆಚ್ಚುಕಡಿಮೆ ಒಂದು ವರ್ಷದಲ್ಲಿ ಈ ಜೇನೆಯು ಜಾಸ್ತಿಯಾಗುವುದಾಗಿಯೂ ಡಾಕ್ಟರರು ಹೇಳಿರುತ್ತಾರೆ-ಕ್ಷಯರೋಗವು ಸಾಂಕ್ರಾಮಿಕರೋಗ, ಈ ವಿಚಾರ ಅವರಿಗೆ ಹೇಳಿದರೆ ಈ ಗೃಹವನ್ನೇ ಬಿಟ್ಟು ಹೋಗುವ ಸಂಭವ ಬರಬಹುದು ಮತ್ತು ಇರುವ ಸಂಭವ ಬಂದರೆ ಇಲ್ಲಿ ಬೇರೆ ಯಾರೂ ಊಟಕ್ಕೆ ಉಳಿಯಲಾರರು. ಆದಕಾರಣ ಎಷ್ಟೇ ಒಳ್ಳೆಯವರಾದರೂ ಭೀಮಾಬಾಯಿಯವರು ನನಗೆ ಮನೆ ಬಿಟ್ಟು ಹೋಗಲು ಹೇಳಿಯೇತೀರುತ್ತಾರೆಂಬ ವಿಷಯವು ಸ್ಪಷ್ಟವಾಗಿ ತೋರುತ್ತದೆ. ಮತ್ತು ಬೇರೆಕಡೆಗೆ ಇಷ್ಟು ಸುಲಭವಾಗಿಯೂ ಉತ್ತಮವಾಗಿಯೂ ಇರುವ

ವಸತಿಗೃಹಗಳು ಇರಲಿಲ್ಲ. ಕಾರಣ ವೆಂಕಟರಾಯರು ಏನೂ ಹೆಚ್ಚುವಮಾತಾಡದೆ ) ಡಾಕ್ಟರರ ಅಭಿಪ್ರಾಯವು ಹಾಗೇನೂ ಗಾಬರಿಯಾಗುವಂತಿಲ್ಲವೆಂದು ಹೇಳಿದರು.

ಈ ಉತ್ತರದಿಂದ ಭೀಮಾಬಾಯಿಯವರಿಗೆ ಸಮಾಧಾನವಾಗುವಂತೆ ಇರಲಿಲ್ಲ. ಯಾಕಂದರೆ- ವ್ಯವಹಾರದಲ್ಲಿ ಒಳ್ಳೇ ಚತುರತೆ ಇರುವ ಇವರಿಗೆ ಹಾಗೆ ತೋರಿದುದು ಆಶ್ಚರ್ಯವಲ್ಲ. ಪುನಃ ವೆಂಕಟರಾಯರನ್ನು ನೋಡಿ ಅಷ್ಟೇನು ಗಾಬರಿಯಾಗುವಂತಿಲ್ಲವೆಂದರೇನು. ?

**ವೆಂಟಕರಾಯರು** :— ಅಂದರೆ ಮತ್ತೇನೂ ಇಲ್ಲ. ಈಮುತ ಡಾಕ್ಟರರಿಗೆ ಹತ್ತುರೂಪಾಯಿ ಕೊಟ್ಟಂತೆಯಾಯಿತು. ಅದರ ಬದಲಾಗಿ ಬೇರೆ ಔಷಧಿಯನ್ನಾದರೂ ತೆಗೆದುಕೊಂಡಿದ್ದರೆ ಒಳ್ಳೇದಾಗುತ್ತಿತ್ತು.

ಭೀಮಾಬಾಯಿಯವರಿಗೆ ಸ್ವಲ್ಪ ಸಮಾಧಾನವಾಗಿ ಈ ಬೇಸಿಗೆ ತಾಪದಿಂದಲೇ ಈ ರೀತಿಯಾಗುತ್ತಿರಬಹುದಲ್ಲವೇ ? ಬೇಸಿಗೆ ಉರಿಯು ಎಲ್ಲರಿಗೂ ತೊಂದರೆಯನ್ನುಂಟುಮಾಡುವುದೆಂದು ಹೇಳಿದರು.

**ವೆಂಕಟರಾಯರು** :— ಮತ್ತೇನು ! ಅದರ ಪ್ರಭಾವವೇ ಇದು.

ಭೀಮಾಬಾಯಿಯವರು ಅಲ್ಲಿಂದ ಹೊರಟುಹೋದರು.

ಅವರು ಹೋದನಂತರ ವೆಂಕಟರಾಯರು ಕಾಫಿಯ ಎರಡು ಗುಟುಕನ್ನು ತೆಗೆದುಕೊಂಡಿದ್ದರು. ಅಷ್ಟರಲ್ಲಿ ಅದು ಪೂರಾ ತಣ್ಣಗಾಗಿಹೋಗಿತ್ತು ಆದರೂ ಅದರಿಂದ ಸ್ವಲ್ಪಮಟ್ಟಿಗೆ ಆಯಾಸ ಪರಿಹಾರವಾದಂತೆ ತೋರಿತು.

ಮೇಜಿನಮೇಲಿನ ನಕಾಶೆಯು ಅಲ್ಲೇಇತ್ತು. ಉದ್ಯೋಗಪತ್ರಿಕೆಯ ಜಾಹೀರಾತು ಅವರನ್ನು ನೋಡುತ್ತಾಇತ್ತು. ಪತ್ರ ಬರೆಯುವುದಕ್ಕಾಗಿ ಕಾಗದವನ್ನು ಮೊದಲೇ ತೆಗೆದಿದ್ದರು. ಏನೋ ನಾಲ್ಕು ಸಾಲು ಬರೆದು ಲಗತು ನಕಾಶೆಯನ್ನು ಇಟ್ಟು ಒಂದು ಲಕೋಟೆಯಲ್ಲಿ ಸೇರಿಸಿ, ಕವರಿನ ಮೇಲೆ ಶ್ರೀನಿವಾಸ್ ಎಂಡ್ ಬ್ರದರ್ಸ್ ಎಂಬುದಾಗಿ ವಿಳಾಸ ಬರೆದು ಅದನ್ನು ಪೋಸ್ಟಿಗೆ ಹಾಕಲು ಬಟ್ಟೆಹಾಕಿಕೊಂಡು ಮನೆಯಿಂದ ಹೊರಗೆ ಹೊರಟರು.

---

# ೩ನೆಯ ಪರಿಚ್ಛೇದ.

## ತಂದೆಯ ಅಧಿಕಾರ.

ನಿರ್ಮಲೆಯು (ಸಂತಾಪದಿಂದ,) ಇದೇನು? ಸ್ವಾರ್ಥದ ಕೆಲಸ ನನಗೆ ಬೇಡ ಬೇಡ; ತಂದೆಯೇ ನಿನ್ನ ತಂದೆತನವು ನನಗೆ ಬೇಡ. ಪಿತೃತ್ವವು ಒಂತೆಂದು ಈ ರೀತಿ ಮನಸ್ವಿ ಕೆಲಸ ನಡಿಸುವದೇ? ಹೀಗೆನ್ನುತ್ತ ಕಾಲನ್ನು ಅಪ್ಪಳಿಸಿ "ಹಿರಿಯರ ಆಜ್ಞೆಯನ್ನು ನಾವು ಜೀವಿತವಾಗಿರುವಾಗ ಪಾಲಿಸುವದು, ಸತ್ತಮೇಲೂ ಪಾಲಿಸಬೇಕೇ?" ನಮ್ಮ ಸಮಾಜದಲ್ಲಿ ಇದೇನು ಕಡಿಮೆ ಅಪರಾಧವು. ಮತ್ತು ಹಿಂದೂ ಸಮಾಜದಲ್ಲಿ ಬಾಲಕಿಯರ ಮೇಲೆ ತಂದೆಯ ಅಧಿಕಾರವು ಒಬ್ಬ ಚಕ್ರವರ್ತಿಗೆ ಇರುವಷ್ಟು ಇರುತ್ತದೆ.

**ವಿಶ್ವಾಸರಾವ್** — ಆಶ್ಚರ್ಯದಿಂದ ನಿರ್ಮಲೆಯ ಕಡೆಗೆ ನೋಡಿದರು. (ನಿರ್ಮಲೆಯ ತಂದೆಯು ಅಕ್ಕನನ್ನು ಇವರಿಗೆ ಲಗ್ನಮಾಡಿದ್ದರು.) ನಿರ್ಮಲೆಗೆ ಇನ್ನೂ ಸಿಟ್ಟು ಹೆಚ್ಚಾಯಿತು. ಏನು? ಮಾವನೆ ಏನು? ಅದು ಎಂಥಾ ವಿಲ್ಲು! [ಮೃತ್ಯುಪತ್ರ] ಸ್ವಾರ್ಥ-ಅಪ್ಪಣೆಯ ಪತ್ರವಾಗಿರುತ್ತದೆ. ಸ್ತ್ರೀಯರ ನಾಶದ ತಾಮ್ರಪಟವಾಗಿರುವದಲ್ಲ! ಗುಲಾಮ-ಗುಲಾಮ ಎಂದು ಯಾರಿಗೆ ಹೇಳುತ್ತಾರೋ ಅವರು ಗುಲಾಮರಲ್ಲ; ನಿಜವಾಗಿಯೂ ಆ ಶಬ್ದವು ಸ್ತ್ರೀಯರಿಗೆ ಸಲ್ಲತಕ್ಕದ್ದೇ. ಗುಲಾಮರಿಗೆ ಜೀವಂತದಣಿಯು ಆಜ್ಞೆಮಾಡುತ್ತಾನೆ. ಆದರೆ ನಮ್ಮ ಸ್ತ್ರೀವರ್ಗಕ್ಕೆ ಯಜಮಾನರು ಸತ್ತರೂ ಅವರ ಆಜ್ಞೆಯನ್ನು ಪಾಲಿಸಬೇಕಾಗುವದು.

**ವಿಶ್ವಾಸರಾವ್** :— ನಿರ್ಮಲೆ, ಇಂಥಾ ಸೂಕ್ಷ್ಮವಿಚಾರದಲ್ಲಿ ವರಟುತನವು ಪ್ರಯೋಜನವಿಲ್ಲ. ಕೇವಲ ಸೂಕ್ಷ್ಮವಾಗಿ ನಡೆಯಬೇಕಾಗುವದು.

**ನಿರ್ಮಲೆ** :— ಸ್ತ್ರೀಯರು ಮಾತ್ರ ವರಟುತನದಿಂದ ವರ್ತಿಸಬಾರದು (ಎಂದು ಸಿಟ್ಟಿನಿಂದ ಹೇಳುತ್ತಾ ಬೆವರು ವರಿಸುವ ಕರವಸ್ತ್ರವನ್ನು ಮುದ್ದೆ ಮಾಡಿ ಒಂದು ಕಡೆ ಬೀಸಾಡಿ ಬಿಟ್ಟಳು.)

**ವಿಶ್ವಾಸರಾವ್** :— ಏನೂ ಮಾತಾಡದೆ ಸುಮ್ಮನೆ ನಿಂತುಬಿಟ್ಟರು ಮತ್ತು ಮುಖದ ಮೇಲಿನ ಬೆವರನ್ನು ಚೌಕದಿಂದ ವರಿಸಿಕೊಳ್ಳುತ್ತಿದ್ದರು.

**ನಿರ್ಮಲೆ**:— (ಸಿಟ್ಟಿನಿಂದ) ಪುರುಷರಿಗೆ ಹ್ಯಾಗೆ ವರಟುತನದ ಬಾಯಿದೆ ಕೊಟ್ಟಿರುತ್ತಾರೆ? ನೋಡಿರಿ! ಈ ವಿಲ್ಲಿನಲ್ಲಿ ಪ್ರತಿಯೊಂದು ಶಬ್ದವೂ ಪುರುಷರ ವರಟುತನವನ್ನೂ ಸ್ವಾರ್ಥಪರತೆಯನ್ನೂ ತೋರಿಸುತ್ತವೆ ಮತ್ತು ಸ್ತ್ರೀಯರ ಗುಲಾಮಗಿರಿಯನ್ನು ವ್ಯಕ್ತಮಾಡುತ್ತದೆ ಆಹಾ! ಈ ಮೃತ್ಯು ಪತ್ರವನ್ನು ಎಷ್ಟು ಜಾಣತನದಿಂದ ಮಾಡಿರುತ್ತಾರೆ. ಇದರಲ್ಲಿ ಸ್ವಲ್ಪವಾದರೂ ಬೆರಳು ಸಿಗುವಂತಿಲ್ಲ ಶಹಬಾಸ್! ಭಲೇ ಗಂಡಸರೇ!

ವಿಶ್ವಾಸರಾಯರು (ಮನಸ್ಸಿನಲ್ಲಿ) ವಿಶೇಷವೇನದೆ ಇದರಲ್ಲಿ? ಎಂದು ಗುಣಗುಟ್ಟಿದರು.

**ನಿರ್ಮಲೆ**.— ಏನು? ವರ್ಷಕ್ಕೆ ಮೂರುನೂರು ರೂಪಾಯಿ! ನಾನು ಇದುವರೆಗೆ ಒಳ್ಳೇ ಐಷ್ ಆರಾಮದಿಂದ ಕಾಲಕಳೆದವಳು. ಈಗ ಮೂನ್ನೂರೇ ರೂಪಾಯಿಯಲ್ಲಿ ಮೊದಲಿನಂತೆ ಇರಲು ಹೇಗೆ ಬಂದೀತು? ಈ ನನ್ನ ಒಂದೊಂದು ಸೀರೆಗೆ ನೂರು ನೂರು ರೂಪಾಯಿ ಬೀಳುತ್ತವೆ. ಅಂದಮೇಲೆ ನನಗೆ ಹೊಸ ಹೊಸ ಸೀರೆಗಳನ್ನು ಇನ್ನು ತೆಗೆದುಕೊಳ್ಳುವುದು ಹೇಗೆ? ಮತ್ತು ನಾನು ನನ್ನ ಕಮಿಟಿಗೆ ಹೋಗುವಾಗ ಒಳ್ಳೇ ಸೀರೆ ಉಡದೆ ಹೋ-ದರೆ ಸಹಪಾಠಿ ಸ್ತ್ರೀಯರು ಅಪಹಾಸ್ಯಮಾಡಿ ನಗುವರು. ಮೊದಲೇ ನಮ್ಮ ತಂದೆಯವರಿಗೆ ಒಳ್ಳೇ ಡ್ರೇಸ್ ಮಾಡುವುದು ಸರಿಬರುತ್ತಿರಲಿಲ್ಲ. ಅವರ ಮರಣಾಂತರವಾದರೂ ಮನಸ್ಸು ಬಿಟ್ಟು ಉಪಯೋಗಿಸಬೇಕೆಂದು ನನ್ನ ಆಶೆಯಿತ್ತು. ಅದಕ್ಕೂ ಈಗ ಕಲ್ಲುಬಿದ್ದಂತಾಯಿತು. ನನ್ನ ಮಾತಿನಿಂದ ನಿಮಗೆ ನಗು ಬರಬಹುದಲ್ಲವೇ?

**ವಿಶ್ವಾಸರಾವ್**:— (ಸ್ವಲ್ಪ ಹಾಸ್ಯ ಮುದ್ರೆಯಿಂದ) ಮೋಜೇ ಕಾಣುತ್ತದೆ. ನಗುವುದೇಕೆ?

**ನಿರ್ಮಲೆ**:— ನಮ್ಮ ತಂದೆಯವರು ನನ್ನ ವಯಸ್ಸಿನ ಕಡೆಗಾದರೂ ಲಕ್ಷ್ಯ ಕೊಡಬಹುದಾಗಿತ್ತು. ಯಾಕಂದರೆ ನನಗೆ ಈಗ ಹತ್ತೊಂಬತ್ತು ತುಂಬಿ ಇದೇ ಮೇ ತಿಂಗಳಿಗೆ ಇಪ್ಪತ್ತಕ್ಕೆ ಪ್ರಾರಂಭವಾಗುತ್ತದೆ.

ನಿರ್ಮಲೆಯ ಮಾತು ಕೇಳಿದೊಡನೆ ವಿಶ್ವಾಸರಾಯರಿಗೆ ತುಂಬಾ ನಗು ಬಂತು.

**ವಿಶ್ವಾಸರಾವ್**:–ನಿರ್ಮಲೆ, ಅದರಲ್ಲಿ ಏನು ಹೆಚ್ಚುಕಡಿಮೆಯಾಗಿವೆ ? ವಯಸ್ಸು ಜಾಸ್ತಿಯಾದ್ದರಿಂದ ನೀನು ಪ್ರೌಢತರುಣಿಯಾಗಿರುವೆ. ಇಷ್ಟೇ ಅಲ್ಲವೆ ?

**ನಿರ್ಮಲೆ** :— ಹೌದು; ನಾನು ಪ್ರೌಢಬಾಲೆಯಾಗಿರುವುದೇನೋ ನಿಜ, ಆದರೆ ಅದಕ್ಕೆ ತಕ್ಕಂತೆ ಮೋಹಕವಸ್ತುಗಳು ?

**ವಿಶ್ವಾಸರಾವ್** :— ನಿನ್ನ ಶಂಕೆಯು ಈ ವಿಷಯದಲ್ಲಿ ಸರಿಯಾಗಿರುವುದಿಲ್ಲ.

**ನಿರ್ಮಲೆ**.—ನಿಜ. ಮುನ್ನೂರು ರೂಪಾಯಿಂದ ನನ್ನ ಉಪಜೀವನವು ಹೇಗಾದೀತು ? ಈಚೆಗೆ ತಂದೆಯವರಿಗೆ ಸ್ತ್ರೀಸ್ವಾತಂತ್ರ್ಯದ ವಿಷಯಕ್ಕೆ ತಿರಸ್ಕಾರಕ್ಕೆ ಪ್ರಾರಂಭವಾಗಿತ್ತು. ಅದನ್ನು ಅವರು ಸತ್ತಮೇಲೂ ನಾನು ಅನುಭವಿಸಬೇಕೇ ? ಇಂಥ ಕ್ಷುದ್ರತನಕ್ಕೆ ವ್ಯಸನಪಡಬೇಕಾಗಿದೆ. ಇಷ್ಟು ದೊಡ್ಡ ಆಸ್ತಿಇದ್ದೂ ನನಗೆ ಮಾತ್ರ ವರ್ಷಕ್ಕೆ ಮುನ್ನೂರು ರೂಪಾಯಿಯೇ ?

**ವಿಶ್ವಾಸರಾವ್** :— ಅದು ನಿನ್ನ ಖುಷಿಯ ಮೇಲಿರುವದು.

**ನಿರ್ಮಲೆ**.—(ಮುಖವು ಕೆಂಪೇರಿ) ಏನು ? ನಿಮ್ಮ ಮಾತಿನ ಅರ್ಥವೇ ಗೊತ್ತಾಗುವುದಿಲ್ಲ.

(ಆಕೆಯ ಹೇಳುವಿಕೆಯ ಮರ್ಮವನ್ನು ತಿಳಿದ ವಿಶ್ವಾಸರಾಯರು ಮನಸ್ಸಿನಲ್ಲಿಯೇ ನಗುತ್ತಾ)

**ವಿಶ್ವಾಸರಾವ್**: — ನಿರ್ಮಲೆ, ಸುಮ್ಮನೆ ಏಕೆ ಕಂಠಶೋಷಣೆ ಮಾಡಿಕೊಳ್ಳುತ್ತೀ ? ವ್ಯವಹಾರ ರೀತಿಯಿಂದ ತಿಳಿದುನೋಡಿದರೆ ನೀನು ಹೇಳಿದಂತೆ ಯಾವಭೇದವೂ ಕಾಣುವದಿಲ್ಲ. ಅದರಲ್ಲೂ ಮೂರುನೂರು ರೂಪಾಯಿಯ ವಾಯ್ದೆಯು ಕೂಡಾ ಸ್ವಲ್ಪ ದಿವಸದ ಮಟ್ಟಿಗೆ ಇರುವುದು.

**ನಿರ್ಮಲೆ**: — ಸ್ವಲ್ಪದಿವಸವೇ ಎಂದರೆ ?

**ವಿಶ್ವಾಸರಾವ್**:— ಅದರಲ್ಲೂ ನೀನು ಚತುರಳಿದ್ದೀ ಹಾಗೂ ಸುರೂಪಿಯಾಗಿರುವೆ. ಕಾರಣ ನಿನ್ನ ಲಗ್ನ ಆಗುವ ವರೆಗೆ ಈ ವಾಯ್ದೆ ಇರುತ್ತದೆ. ಲಗ್ನ ಆದೊಡನೆಯೇ ಮೂರುನೂರಕ್ಕೆ ಬದಲಾಗಿ ಮೂರುಸಾವಿರವೇ ನಿನ್ನ

ವಶಕ್ಕೆ ಬಂದಹಾಗೆ; ಅಲ್ಲದೆ ಎಲ್ಲ ಆಸ್ತಿಯೂ ನಿನ್ನದೇ ಆಗುವುದು ನಿಜವಾಗಿಯೂ ನೀನು ಭಾಗ್ಯವಂತಳು ನಿಜ.

**ನಿರ್ಮಲೆ**-- ಇದು ಭಾಗ್ಯವಲ್ಲ! ಭಾಗ್ಯದ ಚೇಷ್ಟೆಯಾಗಿರುತ್ತದೆಂದು ಹೇಳುತ್ತಾ ಖುರ್ಚಿಯಿಂದ ಎದ್ದು ಕಾಲು ಅಪ್ಪಳಿಸುತ್ತಾ ಕೋಣೆಯಲ್ಲಿ ತಿರುಗಾಡಹತ್ತಿದಳು

**ವಿಶ್ವಾಸರಾಯರು** - ಇವನ್ನೆಲ್ಲಾ ಆಶ್ಚರ್ಯಮುದ್ರೆಯಿಂದ ನೋಡುತ್ತಾ ಇದ್ದರು.

**ನಿರ್ಮಲೆ:**-- (ಸಿಟ್ಟಿನಿಂದ) ಮಾವನೇ ನೀವೇ ತಿಳಿದುನೋಡಿರಿ. ಅಪ್ಪನು ಯಾವವಿಷಯದಲ್ಲಿ ಈ ಹಿಂದೆ ನನಗೆ ಸ್ವತಂತ್ರತೆ ಕೊಟ್ಟಿದ್ದನು? ಅದಂತೂ ಇರಲಿ. ಆದರ ಈಗಲಾದರೂ ನನಗೆ ಸ್ವತಂತ್ರ ಕೊಡಬೇಕಾಗಿತ್ತೋ ಇಲ್ಲವೋ? ತಂದೆಯ ಪಶ್ಚಾತ್ತಾ ನನಗೆ ಸ್ವಾತಂತ್ರ್ಯಸಿಗಬಹುದೆಂದು ಬಹಳವಾಗಿ ನಂಬಿಕೊಂಡಿದ್ದೆನು. ಅದನ್ನು ನನ್ನ ತಂದೆಯು ಈ ವಿಲ್ಲ ಪತ್ರದಿಂದ ಸರಿಯಾಗಿ ಕಟ್ಟಿಹಾಕಿದಂತಾಗಲಿಲ್ಲವೇ? ಹೋಗಲಿ! ಮೂರುನೂರಕ್ಕೆ ಬದಲಾಗಿ ಮೂರುಸಾವಿರವಾದರೂ ಇದ್ದರೆ ಅಷ್ಟಕ್ಕೆ ಸಂತೋಷಪಡಬಹುದಾಗಿತ್ತು. ಹಾಗಾದರೆ ಈ ರೀತಿ ಅದರಲ್ಲಿ ಶರ್ತುಹಾಕುವುದೆಂದರೇನು? ಐಶ್ವರ್ಯವು ಬೇಗನೆ ಸಿಗಲೆಂಬಮೋಹದಿಂದ ಬೇಗನೆ ಲಗ್ನಮಾಡಿಕೊಳ್ಳಲಿ,ಎಂದು ಅಲ್ಲವೇ? ತಂದೆಯಂಥ ಸುಧಾರಕಪುರುಷರಿಗೆ ಶೋಭಿಸತಕ್ಕ ಮಾತೋ ಇದು!

**ವಿಶ್ವಾಸರಾವ್**:— ನಿಮ್ಮ ತಂದೆಯವರು ಅಂಥದೇನು ತಪ್ಪುಮಾಡಿರುವುದಿಲ್ಲ. ವಿಚಾರಮಾಡಿದರೆ ಕುಣಿಪಾಡುವಂಥ ಯಾವಸಂಗತಿಗಳೂ ಅದರಲ್ಲಿರುವದಿಲ್ಲ. ಮತ್ತು ನಿನ್ನ ವಯಸ್ಸು, ವಿದ್ಯೆ, ಐಶ್ವರ್ಯ ಇವುಗಳನ್ನು ನೋಡಿದ ಯಾವ ತರುಣನಾದರೂ ನಿನ್ನ ಕಾಲಮೇಲೆಬಿದ್ದು ಲಗ್ನಕ್ಕೆ ಬಂದಾರು! ನೀನು ಮಾತ್ರ ಲಗ್ನಮಾಡಿಕೊಳ್ಳುವುದನ್ನು ತಿಳಿಸಿದರೆ!

**ನಿರ್ಮಲೆ**.— ಲಗ್ನದ ವಿಚಾರದಲ್ಲಿ ನನ್ನ ಅಭಿಪ್ರಾಯವು ಹೇಗಿರುವುದೆಂಬುದು ತಮಗೆ ತಿಳಿದೇಯಿರುತ್ತದೆ. ಎಲ್ಲಿಯವರೆಗೆ ಲಗ್ನವಾದ ಸ್ತ್ರೀಯರಿಗೆ ನಿಜವಾದ ಹಕ್ಕುಗಳು ದೊರೆಯುವದಿಲ್ಲವೋ ಅಲ್ಲಿಯವರೆಗೆ ನನ್ನಂಥ ಸುಶಿ

ಕ್ಷಿತ ಬಾಲಕಿಯರು ಲಗ್ನಕ್ಕೆ ಒಪ್ಪಿಕೊಳ್ಳುವುದು ತಮ್ಮ ನಾಶವನ್ನು ತಾವೇ ಮಾಡಿಕೊಂಡಂತೆಯೇ ಸರಿ. ಈಹಿಂದೆ ನಡೆದುಬಂದಂತೆ ನಡೆಯುವ ಅಪಿ ದ್ಯಾವತಿ ( ಸುಂಬಳ ಕುರಿಯಂತಿರುವ ) ಬಾಲೆಯರಿಗೂ ಹೊಸ ನಾಗರಿಕತೆ ಯಲ್ಲಿ ಕಲಿತು ಸುಧಾರಿಸಿದ ಬಾಲೆಯರಿಗೂ ಭೇದವೇನು ಉಳಿಯಿತು ?

**ವಿಶ್ವಾಸರಾವ್**:—ಓಹೋ! ಹೆಚ್ಚು ಕಡಿಮೆ ಇಲ್ಲದೇನು ಮಾಡೀತು ನಿಮ್ಮ ಲಗ್ನದ ಮರ್ಯಾದೆಯ ಅವಧಿಯು ಎಲ್ಲಿಯವರೆಗೆ ಮುಟ್ಟಿರುವದು? ಲಗ್ನದ ಮರ್ಯಾದೆಯಿಂದಲೇ ನಿಮ್ಮ ಸಂತೋಷವಾಗಬೇಕಾಗಿತ್ತು ಹಾಗೆ ಆಗದೆ ಅದರ ವಿರುದ್ಧ ಹುಚ್ಚುತಿಳಿವಳಿಕೆಯು ನಿಮ್ಮಂಥ ಸುಶಿಕ್ಷಿತರೆನ್ನಿಸಿಕೊ ಳ್ಳುವವರ ತಲೆಯೊಳಗೆ ಪ್ರವೇಶಿಸಹತ್ತಿರುವುದು.

ಈ ಹೊಸ ಸುಧಾರಕರ ಮತ್ತು ಸುಧಾರಣೆಯ ಅಭಿಮಾನಿಗಳ ತಲೆಕೆಳ ಗಾಗಬೇಕಾಗಿದೆ. ನೀವು ಪ್ರಾರಂಭಿಸಿರುವ ಸುಧಾರಣೆಯನ್ನು ಸೂಕ್ಷ್ಮರೀತಿ ವಿಚಾರ ಮಾಡಿದರೆ ಸ್ತ್ರೀಯರ ಉನ್ನತಿಗೋಸ್ಕರವಾಗಿ ಅಲ್ಲ; ಅದರ ಚಾಲಕರ ಸ್ವಾರ್ಥಸಾಧನೆಯ ಬುದ್ಧಿಯಿಂದ ನಡೆದಂತೆ ತೋರುತ್ತದೆ. ಸುಧಾರಣೆ-ಸುಧಾ ರಣೆ ಎಂಬುದು ಬಿಚ್ಚಿಗೆ ಏರಿದಂತೆ ಅದರ ದುರುಪಯೋಗಮಾಡಿಕೊಳ್ಳಬ ಹುದೋ ? ಯಾಕೆಂದರೆ ಸಕ್ಕರೆಯು ಸಿಹಿಯಾಗಿರುವುದೆಂದು ಅತಿಯಾಗಿ ಸೇವಿಸಿದರೆ ಅದು ಹಿತಮಾಡಬಲ್ಲದೋ? ಸುಧಾರಣೆಯ ವಿಷಯವೂ ಹಾಗೆಯೇ ಇರುವುದು. ಅದು ಒಳ್ಳೇಮಾರ್ಗವಿರುವುದೆಂದು ಅದಕ್ಕೆ ಮರ್ಯಾದೆ ಇರು ವುದೋ ಇಲ್ಲವೋ ?

**ನಿರ್ಮಲೆ**:— ಮರ್ಯಾದೆ ಏನು? ನಾವು ಹೆಂಗಸರು ಮರ್ಯಾದ ವಂತರು, ಗಂಡಸರು ಮಾತ್ರ ಸುಧಾರಣೆ ಎಂದು ಹೇಳುತ್ತ ಮನಸ್ವಿ ಮೆರೆ ಯಬಹುದೇ !

ಆಕೆಯ ಮಾತಿನ ಅರ್ಥವು ವಿಶ್ವಾಸರಾಯರಿಗೆ ಆಗಲೇ ತಿಳಿಯಿತು. ಸಮಾಜಸುಧಾರಕ ಕಮೀಟಿಯ ಕೆಲಜನ ಗಂಡಸರ ವರ್ತನೆಯನ್ನು ನೋಡಿ ನಿರ್ಮಲೆಯು ಈ ರೀತಿ ಹೇಳಿದ್ದು!

**ವಿಶ್ವಾಸರಾವ್**:—ನಿರ್ಮಲೆ, ಲಗ್ನಮಾಡಿಕೊಳ್ಳುವ ನಿನ್ನ ನಿಜವಾದ ಹಕ್ಕನ್ನು ಕಳೆದುಕೊಳ್ಳಬೇಡ. ಯಾಕಂದರೆ || **ಯತ್ರ ನಾರ್ಯಸ್ತು ಪೂಜ್ಯಂತೆ ರಮನ್ತೇ ತತ್ರದೇವತಾಃ** || ಅಂದರೆ ಯಾವ ಮನೆಯಲ್ಲಿ ಸ್ತ್ರೀಯರಿಗೆ ಸತ್ಕಾರವಾಗುತ್ತೋ ಅಲ್ಲಿ ದೇವತೆಗಳು ಕುಣಿದಾಡುತ್ತಾರೆ. ಎಂಬುಕ್ತಿಯಿರುವುದು. ಆದರೆ ಈಚೆಗೆ ಸುಧಾರಿಸಿದ ಕೆಲ ಗಂಡಸರು ತಮ್ಮ ಹೆಂಗಸರನ್ನು ಹೇಗೆ ನಡಿಸಿಕೊಳ್ಳಬೇಕೆಂಬುದನ್ನು ತಿಳಿಯದೆ ಅವರ ವಶವರ್ತಿಗಳಾಗಿರುತ್ತಾರೆ. ಅದರಲ್ಲೂ ನಿನ್ನಂಥ ಪ್ರೇಮಮಯ ಸುಶಿಕ್ಷಿತ-ಸುರೂಪಿಯಾದ ಮತ್ತು ದೊಡ್ಡ ಆಸ್ತಿಯನ್ನು ಜೊತೆಗೆ ತರುವ ಹೆಂಡತಿಯ ಹೇಳಿಕೆಯಂತ ಗಂಡನು ಇರಬೇಕಾದುದರಲ್ಲಿ ಆಶ್ಚರ್ಯವೇ ಇಲ್ಲ!

**ನಿರ್ಮಲೆ**:— ಈ ವಿಷಯವು ಹೀಗೆ ತಮಾಷೆಯಾಗಿ ಮಾತಾಡಿ ಬಿಡುವುದಲ್ಲ. ಲಗ್ನವೆಂದಬಳಿಕ ಅದರಲ್ಲಿ ಕಟ್ಟು ಎಂಬುವದು ಬಂದೇ ಬರುವುದು. ಲಗ್ನ ಮಾಡಿಕೊಂಡು ಆ ಕಟ್ಟುಗಳನ್ನು ಪಾಲಿಸದಿದ್ದರೆ ಅದು ಲಗ್ನವಲ್ಲ; ಲಗ್ನದ ಅಪಹಾಸ್ಯವಾಗುವದು. ಅದಕ್ಕಿಂತಲೂ ಲಗ್ನಮಾಡಿಕೊಳ್ಳದಿರುವುದೇ ಮೇಲೆಂದು ನನ್ನ ಅಭಿಪ್ರಾಯ. ಲಗ್ನಮಾಡಿಕೊಂಡು ನನ್ನ ಸ್ವಾತಂತ್ರ್ಯವನ್ನು ನಾನೇ ನನ್ನ ಕೈಯಿಂದ ಕಳೆದುಕೊಳ್ಳುವ ಇಷ್ಟವು ನನಗಿಲ್ಲ. ನನಗೆ ಸಂಪೂರ್ಣಸ್ವಾತಂತ್ರ್ಯಬೇಕು. ಲಗ್ನದ ವಿಚಾರದಲ್ಲಿ ಚರ್ಚೆಮಾಡತಕ್ಕ ವಿಚಾರವೇ ನನಗೆ ಅಗತ್ಯವಿಲ್ಲ.

**ವಿಶ್ವಾಸರಾವ್**:—ಸುಧಾರಣೆಯ ವಿಚಾರದಲ್ಲಿ ನಾವು ಎಷ್ಟೇ ಮುಂದುವರೆದಿದ್ದರೂ ಇಂಥ ವಿಚಾರಗಳನ್ನು ಮನ್ನಿಸುವದು ಎಂದಿಗೂ ಶ್ರೇಯಸ್ಕರವಾಗಲಾರದು. ಸ್ವತಂತ್ರತೆಯ ಅತಿಕಲ್ಪನೆಯು ನಿನ್ನ ತಲೆಯಲ್ಲಿ ಸೇರಿರುವುದು. ಇಂಥ ವಿಚಾರಗಳಿಂದ ಸ್ತ್ರೀಯರ ಉನ್ನತಿಯಾಗದೆ ಅವನತಿ ಮಾತ್ರ ಖಂಡಿತ ಆಗಲು ಅಡ್ಡಿಯಿಲ್ಲ.

**ನಿರ್ಮಲೆ**:— ಹೆಂಗಸರ ವಿಷಯದಲ್ಲಿ ನಿಮಗೆ ಇಷ್ಟು ಅನುದಾರ ಮತವಿರುವುದೆಂಬುದನ್ನು ನಾನು ತಿಳಿದಿರಲಿಲ್ಲ. ಸುಧಾರಿಸಿದ ಯುವಕರು ನಿಮ್ಮಂತೆಯೇ ತಮ್ಮ ಆಲೋಚನೆ ನಡೆಯಿಸಿದರೆ ನಮ್ಮ ಅಭಿವೃದ್ಧಿಯ ಮಾರ್ಗಕ್ಕೆ ನಾವೇ ಅಡ್ಡಬಂದಂತಾಗುವದು.

**ವಿಶ್ವಾಸರಾವ್ :—** ಅಡ್ಡಿಯಿಲ್ಲ; ಅವರೆ ಅನುಭವದಿಂದ ನೀವು ಪಶ್ಚಾತ್ತಾಪವನ್ನು ಹೊಂದಬಹುದು. ವಿಚಾರದ ಉದಾರತೆಯ ಶಬ್ದಗಳು ಕೇಳಲಿಕ್ಕೆ ಸ್ವಲ್ಪ ಸಿಹಿಯಾಗಿದ್ದರೂ ಅನುಭವದಿಂದ ಅವು ಕಹಿಯಾಗುತ್ತವೆ. ಸ್ತ್ರೀಯರ ಉನ್ನತಿಯು ವ್ಯವಹಾರದ ಅನುಭವದಿಂದ ವಿಚಾರವಾಗಬೇಕಾಗಿದೆ. ಹಾಗೆ ವಿಚಾರ ಮಾಡಿದಲ್ಲಿ ನೀನು ಲಗ್ನ ಮಾಡಿಕೊಳ್ಳುವುದೇ ನನಗೆ ಇಷ್ಟವಾಗಿ ತೋರುವದು. ಮತ್ತು ನಿನಗೆ ಅನುರೂಪನಾದ ವರನನ್ನು ಹುಡುಕುವದು ಬಹಳ ಕಷ್ಟವಾಗಲಿಕ್ಕಿಲ್ಲ. ನಮ್ಮ ವಿನಾಯಕನೇ ಇರುತ್ತಾನೆ. ಕೃಷ್ಣರಾಯರ ಅಭಿಪ್ರಾಯವೂ ಹಾಗೇ ಇತ್ತು. ಅವರು ಆಗಾಗ ಇಬ್ಬರೂ ಸರಿಯಾದವರೆಂದು ನನ್ನೊಡನೆ ಹೇಳುತ್ತಿದ್ದರು. ( ಹೀಗೆಂದು ವಿಶ್ವಾಸರಾಯರು ತಮ್ಮ ಕನ್ನಡಕವನ್ನು ಕಣ್ಣಿಗೆ ಹಚ್ಚಿ ನಿರ್ಮಲೆಯ ಕಡೆಗೆ ನೋಡಹತ್ತಿದರು. )

ನಿರ್ಮಲೆಯ ಕಿವಿಗೆ ಈ ಮಾತು ಬಿದ್ದೊಡನೆ ಹುಬ್ಬುಗಂಟಿಕ್ಕಿ, ಹಣೆಯನ್ನೇರಿಸಿ, ಈ ವಿಚಾರದಲ್ಲಿ ನನಗೆ ಇಷ್ಟವಿಲ್ಲವೆಂದುಹೇಳುತ್ತ ಕೈಯಲ್ಲಿ ಕೊಡೆಹಿಡಿದುಕೊಂಡು ಸೀರೆಯ ನೀರಿಗೆಗಳನ್ನು ಸರಿಮಾಡುತ್ತ ಹೊರಗೆ ಹೊರಡಲು ಸಿದ್ಧಳಾದಳು.

**ವಿಶ್ವಾಸರಾವ್:—** ನಿರ್ಮಲೇ ಹೀಗೆ ಎಲ್ಲಿಗೆ ಹೊರಟೆ? ಕಾಫಿಯನ್ನಾದರೂ ತೆಗೆದುಕೊಳ್ಳುವಿಯೋ ಇಲ್ಲವೋ ?

**ನಿರ್ಮಲೆ:—** ಕಾಫಿಗೋಸ್ಕರವಾಗಿ ನನಗೆ ನಿಲ್ಲಲಿಕ್ಕೆ ಬರುವಂತಿಲ್ಲ. ( ಅವಳು ಕೈಯೊಳಗಿನ ಗಡಿಯಾರವನ್ನು ನೋಡಿ ) ಎರಡು ಹೊಡೆಯುವ ಸುಮಾರಕ್ಕೆ ಸುಬ್ರಾಯನ್ ವಕೀಲರ ಕಡೆಯಿಂದ ಮೃತ್ಯುಪತ್ರದ ಸಂಬಂಧ ಕಾಗದ ಪತ್ರಗಳು ಬರತಕ್ಕವಿವೆ. ಈಗ ಒಂದೂವರೆ ಆಯಿತು. ಕಾರಣ ನಾನು ಈಗ ಹೊರಡಲೇಬೇಕು. ವಕೀಲರ ಗುಮಾಸ್ತರು ನಮ್ಮ ಆಶ್ರಮದಲ್ಲಿ ನನ್ನ ದಾರಿ ನೋಡುತ್ತ ಕುಳಿತಿರಬಹುದು. ( ಸೀರೆಯನ್ನು ಸರಿಮಾಡುತ್ತ ಹೊರಗೆ ಹೊರಟಳು )

---

# ೪ ನೆಯ ಪರಿಚ್ಛೇದ.

## ಸಮಾಜೋದ್ಧಾರಕರ ಕವಿಾಟ.

ಕೃಷ್ಣರಾಯರು ನಿರ್ಮಲೆಯ ತಂದೆ; ಅವರ ಶಿಕ್ಷಣವು ಸಾಧಾರಣ ವಾಗಿತ್ತು. ಬಡತನದ ಮೂಲಕ ಮಹಾವಿದ್ಯಾಲಯದೊಳಗೆ ಸೇರುವ ಪ್ರವೇಶಪರೀಕ್ಷೆಯಾದೊಡನೆ ಅವರಿಗೆ ಕೆಲಸಕ್ಕೆ ಸೇರುವ ಪ್ರಸಂಗ ಬಂದದ್ದ ರಿಂದ ಮೊದಲು ರಾಮ-ಎಜನ್ಸಿ ಆಫೀಸಿನಲ್ಲಿ ಇಪ್ಪತ್ತೈದು ರೂಪಾಯದ ಕೆಲಸ ಸಿಕ್ಕಿತು. ಮುಂದೆ ಅವರು ತಮ್ಮ ಹುಷಾರಿಯಿಂದ ಏರುತ್ತೇರುತ್ತ ಅಸಿಸ್ಟಂಟ ಎಜಂಟರ ಕೆಲಸದವರೆಗೂ ಹೋದರು. ಈ ಕೆಲಸವು ತುಂಬಾ ಜವಾಬುದಾರಿಯದಾಗಿತ್ತು. ಅದನ್ನೂ ಕೂಡ ಕೃಷ್ಣರಾಯರು ಕೇವಲ ವಿಶ್ವಾಸ ದಿಂದಲೂ, ಹುಷಾರಿಯಿಂದಲೂ ಮಾಡಿ ಮಾಲಕರಿಂದ ಮೆಚ್ಚಿಗೆಯನ್ನು ಪಡೆದಿದ್ದರು. ಅವರಿಗೆ ಸಂಬಳವೂ ಚೆನ್ನಾಗಿ ಎಂದರೆ ತಿಂಗಳಿಗೆ ಐದುನೂರು ರೂಪಾಯಿ ಸಿಕ್ಕುತ್ತಿತ್ತು. ಆದರೆ ಹೊಟ್ಟೆಶೂಲೆಯ ಬೇನೆಯ ಪೆಸೆಯಿಂದ ಅವರು ತಮ್ಮ ನಾಲ್ವತ್ತೈದನೆಯ ವಯಸ್ಸಿಗೆ ಕೆಲಸಕ್ಕೆ ರಾಜೀನಾಮೆ ಕೊಡ ಬೇಕಾಗಿಬಂತು.

ಸಂಸಾರವು ಚಿಕ್ಕದಿರುವುದರಿಂದಲೂ, ಕಷ್ಟದಿಂದ ಸಂಪಾದಿಸಿದ ಮುದ್ದಿನಬೆಲೆ ಅವರಿಗೆ ಗೊತ್ತಿದ್ದುದರಿಂದಲೂ ಅವರು ನೌಕರಿಮಾಡಿದ ಇಪ್ಪತ್ತೈದು ವರ್ಷದಲ್ಲಿ ಚೆನ್ನಾಗಿ ದುಡ್ಡು ಸಂಪಾದಿಸಿಟ್ಟಿದ್ದರು. ಅಲ್ಲದೆ ಕೇವಲ ನಂಬಿಕೆಯಿಂದಲೂ ದಕ್ಷತೆಯಿಂದಲೂ ಕೆಲಸ ಮಾಡಿದ್ದರಿಂದ ಕಂಪನಿಯ ಮಾಲಕರು ಒಂದು ವರ್ಷದ ಸಂಬಳವನ್ನು ಇನಾಮಾಗಿ ಕೊಟ್ಟಿದ್ದರು. ಆದ್ದರಿಂದ ಕೆಲಸಬಿಟ್ಟಮೇಲೆ ಅವರಿಗೆ ಉಪಜೀವನಕ್ಕೆ ತೊಂದರೆ ಇರಲಿಲ್ಲ. ಬರೇ ಬಡ್ಡಿಯಿಂದಲೆ ಪ್ರತಿತಿಂಗಳಿಗೆ ಅವರಿಗೆ ಇನ್ನೂರಾಐವತ್ತು ರೂಪಾಯಿ ಬರುತ್ತಿತ್ತು.

ಕೆಲಸದಲ್ಲಿರುವಾಗಲೇ ತಾವು ಸಮಾಜೋದ್ಧಾರದ ಯಾವದಾದರೂ ಕೆಲಸಮಾಡಿ ಅದರಿಂದ ತಮ್ಮ ಸಮಾಜಕ್ಕೆ ತನ್ನ ಕೈಲಾದಷ್ಟು ಸಹಾಯ

ಮಾಡಬೇಕೆಂಬ ಆಸೆಯಿತ್ತು; ಕಾರಣ ಕೆಲಸ ಬಿಟ್ಟೊಡನೆಯೇ ಚಳವಳಿಯ ಕೇಂದ್ರವಾದ ಮದರಾಸು ಸಮೀಪದಲ್ಲಿರುವ ಒಂದು ಹಳ್ಳಿಯಲ್ಲಿ ಒಂದು ಸಣ್ಣಬಂಗಲೆ ಕಟ್ಟಿಸಿ ಅಲ್ಲೇ ಇರಲು ಪ್ರಾರಂಭಿಸಿದರು. ಆ ಬಂಗಲೆಗೆ ಅವರು ರಾಧಾಸದನವೆಂದು ಹೆಸರಿಟ್ಟಿದ್ದರು. ಈ ಹಳ್ಳಿಯಲ್ಲಿರಲು ಕಾರಣ ವೇನಂದರೆ–ಇಲ್ಲಿ ಸ್ವಚ್ಛವಾದ ಹವೆಯೂ ನೀರಿನ ಅನುಕೂಲವೂ ಇದ್ದು ಸ್ವಲ್ಪ ಖರ್ಚಿನಲ್ಲಿಯೇ ಮನೆ ಕಟ್ಟುವ ಸ್ಥಳವೂ ಸಿಕ್ಕಿತ್ತು. ಅಲ್ಲದೆ ಆಗಾಗ ರೈಲು ಮೂಲಕ ಮದರಾಸಿಗೆ ಹೋಗಿ ಬರಲು ಅನುಕೂಲವೂ ಇತ್ತು.

ಸಮಾಜದ ಕೆಲಸವನ್ನು ಮಾಡಬೇಕೆಂಬ ಇಚ್ಛೆಯೇನೋ ಬಲವಾಗಿದ್ದಿತು ಆದರೆ ಅದನ್ನು ಯಾವ ರೀತಿ ಮಾಡಬೇಕೆಂಬುದು ರಾಧಾಸದನಕ್ಕೆ ಬಂದುಸೇರುವವರೆಗೆ ನಿಶ್ಚಯವಾಗಿರಲಿಲ್ಲ. ಸಮಾಜ ಸೇವೆಯನ್ನು ಯಾವ ರೀತಿ ಮಾಡಬೇಕೆಂಬುದನ್ನು ಬೇರೆ ಜನರಿಂದ ತಿಳಿದುಕೊಂಡು ಮಾಡುವುದಕ್ಕಿಂತಲೂ ಸ್ವತಃ ಆಲೋಚನೆಯಿಂದ ಮಾಡಬೇಕೆಂದು ಒಂದುಸಾರೆ ಆಲೋಚನೆ ಬರುವುದು. ಆದರೆ ನಾಲ್ಕುಜನರ ಸಲಹೆ ಕೇಳಿ ಯಾವರೀತಿ ಕಾರ್ಯಕ್ರಮವನ್ನು ಪ್ರಾರಂಭಿಸಬೇಕೆಂದು ಒಂದುಸಾರೆ ಯೋಚನೆ ಬರುವುದು. ಕೊನೆಗೆ ಈ ವಿಚಾರದಲ್ಲಿ ವಿಶ್ವಾಸರಾಯರ ಸಲಹೆಯನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದರು.

ವಿಶ್ವಾಸರಾಯರೂ ಕೃಷ್ಣರಾಯರ ಊರವರೇ ಆಗಿದ್ದರು. ಅವರು ಮದರಾಸಿನಲ್ಲಿ ಡಾಕ್ಟರರ ಕೆಲಸವನ್ನು ಮಾಡುತ್ತಿದ್ದರು. ಅವರಿಗೆ ಎಲ್. ಎಂ. ಎಂಡ್ ಎಸ್. ಪರೀಕ್ಷೆಯಾಗಿದ್ದು ಅವರ ಕೆಲಸವೂ ಸರಿಯಾಗಿ ನಡೆಯುತ್ತಿತ್ತು. ವಸಿಲ್ಲಿನಿಂದರೂ ತಿಂಗಳಿಗೆ ನಾಲ್ಕೈದುನೂರು ರೂಪಾಯಿ ಸಿಗುತ್ತಿತ್ತು. ಮತ್ತು ಇವರು ಕೃಷ್ಣರಾಯರ ಸಂಬಂಧಿಗಳಾಗಿದ್ದರು. ಕೃಷ್ಣರಾಯರು ಕೆಲಸದಲ್ಲಿರುವಾಗ ಮಾಲು ಖರೀದಿಗೆ ಬೇರೆಬೇರೆ ಕಡೆಗೆ ಹೋಗುವಪ್ರಸಂಗ ಬರುತ್ತಿದ್ದರಿಂದ ಇವರನ್ನು ಆಗಾಗ ಕಾಣಲು ಅನುಕೂಲವಿರಲಿಲ್ಲ. ರಾಧಾಸದನಕ್ಕೆ ಬಂದಮೇಲೆ ಮೇಲಿಂದಮೇಲೆ ಅಲ್ಲಿಗೆ ಹೋಗುವ ಪ್ರಸಂಗ ಬರಹತ್ತಿತ್ತು.

ವಿಶ್ವಾಸರಾಯರ ಆಲೋಚನೆ ಕೇಳಲು, "ಈಗಿನ ಕಾಲದ ಒಳ್ಳೇ ಚತುರ ಮತ್ತು ವಿದ್ಯಾವಂತ ಆಧುನಿಕ ಮಹರ್ಷಿಗಳ ಸಲಹೆಪ್ರಕಾರ, ನಡೆಯುತ್ತಿರುವ ಮದ್ರಾಸದ **ಸಮಾಜೋದ್ಧಾರಕ ಕಮಿಟಿಗೆ ಸೇರಲು ಆಗ್ರಹ ಮಾಡಿದರು.'** ಕಮಿಟಿಯ ವರದಿ ಮತ್ತು ಕಾರ್ಯಕ್ರಮಗಳ ಯಾದಿಗಳನ್ನು ನೋಡಿದ ಮೇಲೆ ಅದರ ವಿಚಾರ ಅವರಿಗೆ ಇನ್ನೂ ನಂಬಿಕೆ ಹೆಚ್ಚಾಯಿತು. ಕಮಿಟಿಯ ವಿಚಾರದ ತಮ್ಮ ಸ್ವಂತ ಅನುಭವವನ್ನು ವಿಶ್ವಾಸರಾಯರೇ ಹೇಳಿದ ನಂತರ ಕಮಿಟಿಯ ವಿನಹ ಸಮಾಜದ ಕೆಲಸವನ್ನು ಮಾಡಲು ಉತ್ತಮ ಮಾರ್ಗವು ಬೇರೊಂದಿಲ್ಲವೆಂದು ತಿಳಿದು ಕಮಿಟಿಯ ಮೆಂಬರರಾಗಲು ಕೃಷ್ಣರಾಯರು ನಿಶ್ಚಯಿಸಿದರು.

**ವಿಶ್ವಾಸರಾವ್:** ಕೃಷ್ಣರಾಯರೇ ಕೇಳಿ, ನನ್ನ ಅನುಭವವನ್ನೇ ಹೇಳುತ್ತೇನೆ. ಕಮಿಟಿಯಲ್ಲಿ ಸೇರಿದನಂತರ ನನ್ನ ಕಸಬು ಚೆನ್ನಾಗಿ ನಡೆಯಲು ಪ್ರಾರಂಭವಾಯಿತು. ಕಮಿಟಿಯಲ್ಲಿ ನಾನು ತಿಂಗಳಿಗೆ ಎರಡು ಮೂರು ವ್ಯಾಖ್ಯಾನ ಕೊಡಬೇಕಾಗುತ್ತಿತ್ತು. ಅದರಲ್ಲಿ ಓಲ್ಡಸಿಸ್ಟಿಂ (ಹಳೇ ಪದ್ಧತಿಯ) ಜನರ ಚೇಷ್ಟೆಯನ್ನು ಸ್ವಲ್ಪ ಸ್ವಲ್ಪ ಮಾಡಬೇಕಾಗುತ್ತಿತ್ತು. ನನ್ನ ಉಪನ್ಯಾಸಗಳು ಕಮಿಟಿಯ ಮುಖಪತ್ರದಲ್ಲಿ ಬೀಳಲಾರಂಭಿಸಿದವು. ಮತ್ತು ಅಗ್ರಲೇಖದಲ್ಲಿ ಪತ್ರಿಕಾಕರ್ತರು ನನ್ನ ಗುಣ ಕಥನಮಾಡಲಾರಂಭಿಸಿದರು. ಸ್ತ್ರೀಯರ ಹಕ್ಕನ್ನು ಅಭಿವೃದ್ಧಿಪಡಿಸುವ ಪ್ರಮುಖನೆಂದು ನನಗೆ ಅನೇಕ ಕಡೆಗಳಿಂದ ಅಭಿನಂದನೆಗಳು ಬರಲು ಪ್ರಾರಂಭಿಸಿದವು ಇವೇ ನನ್ನ ವೈದ್ಯಕೀಯ ಕೆಲಸಕ್ಕೆ ಹೆಚ್ಚು ಸಹಾಯಮಾಡಿತು. ಕಮಿಟಿಯ ಹಿತಚಿಂತಕರಾದ ಅನೇಕ ಭಗಿನಿಯರಿಂದ ನನಗೆ ಬಹಳ ಆಶ್ರಯ ದೊರೆಯಿತು. ನಾನು ಕಮಿಟಿಯಲ್ಲಿರುವ ದೊಡ್ಡ ದೊಡ್ಡ ಮನುಷ್ಯರ ಸಮಬಾಜು ಕೂಡ್ರುವ ಸಮಯಕೂಡ ಸಿಕ್ಕಿತು. ಕಮಿಟಿಯಿಂದ ನಡೆಯುವ ಪ್ರತಿಯೊಂದು ಮುಖ್ಯಸಭೆಯಲ್ಲಿಯ ಕಾರ್ಯನಿರ್ವಾಹಕ ಮೆಂಬರರಲ್ಲಿ ಮುಖ್ಯಪದವಿಯು ನನಗೆ ದೊರೆಯುತ್ತಿದೆ. ನನ್ನ ಕೆಲಸದ ನಿಮಿತ್ಯ ನನಗೆ ವಿರಾಮವಿರುವುದು ಕಡಿಮೆ; ಇಲ್ಲವಾದರೆ ಇಷ್ಟರೊಳಗೆ ನಾನು ಕಮಿಟಿಯ ಅಧ್ಯಕ್ಷನಾಗುತ್ತಿದ್ದೆನು ! ಆಮೇಲೇನು ದೊಡ್ಡ ದೊಡ್ಡ ರಾಜಮಹಾರಾಜರ

ಭೆಟ್ಟಿಯು ನನಗಾಗುತ್ತಿತ್ತು ! ಮತ್ತು ಕಮಿಟಿ ನೋಡಲು ಬಂದ ಶಿಷ್ಟಾಚಾರದ ಜನರಿಗೆ ಕುತ್ತಿಗೆಯಲ್ಲಿ ಗೌರವವಾಗಿ ಹಾಕುವ ಮಾಲೆಯ ಗೌರವವು ನನಗೆ ದೊರೆಯುತ್ತಿತ್ತು ! ನಿಮಗೆ ಬೇರೆ ಕೆಲಸವಿಲ್ಲ. ಆರಾಮ ಇದ್ದೀರಿ: ಮೂರು ನಾಲ್ಕು ವರ್ಷ ಕಮಿಟಿಯಲ್ಲಿ ಉತ್ತಮರೀತಿ ನಿಮ್ಮ ಗೌರವವಾದರೆ ಅಧ್ಯಕ್ಷರು ! ಅಲ್ಲ. ಯಾಕಂದರೆ ನೀವು ಪದವೀಧರರಲ್ಲಾದ್ದರಿಂದ ಸಹಕಾರಿ ಮಂತ್ರಿಯ ಜಾಗೆಯಾದರೂ ನಿಮಗೆ ಸಹಜ ಸಿಗಬಹುದು. ಈ ಪದವಿಯ ಉಪಯೋಗವನ್ನು ನೀವು ಸರಿಯಾಗಿ ಮಾಡಿದರೆ ಪ್ರತಿವಾರವೂ ನಿಮ್ಮ ಹೆಸರು ವರ್ತಮಾನ ಪತ್ರದಲ್ಲಿ ಪ್ರಕಟವಾಗುವದು. ಇದೂ ಅಲ್ಲದೆ ಬೇರೆ ಕೆಲವು ಲಾಭಗಳನ್ನು ಹೊಂದಬಹುದು. ಆದುದರಿಂದ ನಿಮ್ಮ ಉಳಿದ ಆಯುಷ್ಯವನ್ನು ಕಮಿಟಿಯಲ್ಲಿ ಕಳೆದು, ಸಮಾಜಸೇವೆ ಮಾಡಬೇಕಾಗಿ ನನ್ನ ಆಗ್ರಹದ ವಿನಂತಿ ಇರುವದು.

ಡಾಕ್ಟರರ ಆತ್ಮಗೌರವದ ಮಾತುಗಳು ಕೃಷ್ಣರಾಯರಿಗೆ ಹೆಚ್ಚಾಗಿ ರುಚಿಸಲಿಲ್ಲ. ಯಾಕಂದರೆ ಡಾಕ್ಟರರಂತೆ ಇವರಿಗೆ ಮಾನ್ಯ ಬಿರುದುಗಳು ಬೇಕಾಗಿರಲಿಲ್ಲ. ನಿಜವಾಗಿಯೂ ಸಮಾಜವನ್ನು ಸುಧಾರಿಸುವ ಕ್ರಮವು ಅವರಿಗೆ ಬೇಕಾಗಿತ್ತು. ಮತ್ತು ಕಮಿಟಿಯಲ್ಲಿ ಸೇರುವದರಿಂದ ಈ ಉದ್ದೇಶವು ನೆರವೇರುವ ನಮೂನೆಯನ್ನು ಡಾಕ್ಟರರು ಹೇಳಲೇ ಇಲ್ಲ.

**ಕೃಷ್ಣರಾವ್** :— ಡಾಕ್ಟರರೇ ಕಮಿಟಿಯಲ್ಲಿ ಸೇರುವವರಿಗೆ ಮರ್ಯಾದೆಸಿಗುವುದು; ಇದಕ್ಕೆ ನಾನು ಬಹಳ ಸಂತೋಷಪಡುತ್ತೇನೆ. ಆದರೆ ಆದರ ಆಶೆಯು ನನಗೆ ಇಲ್ಲವುದಿಲ್ಲ. ಏನಾದರೂ ಸಮಾಜಸೇವೆ ಮಾಡಬೇಕೆಂಬುದೇ ನನ್ನ ಹೇತು. ಇದುವರೆಗೂ ಕಮಿಟಿಯು ಯಾವ ಯಾವ ಕಾರ್ಯಮಾಡಿರುವುದೆಂಬುದನ್ನು ನೀವು ತಿಳಿಸಲಿಲ್ಲ. ಸುಮ್ಮನೆ ಕಮಿಟಿಯ ಉದ್ದೇಶವು ಸರಿಯಾಗಿದ್ದರೆ ಪ್ರಯೋಜನವೇನು? ಕಮಿಟಿಯು ಈ ವರೆಗೆ ಮಾಡಿದ ಕಾರ್ಯಗಳನ್ನು ನೋಡಿದ ವಿನಹ ಈಗಲೇ ಮೆಂಬರನಾಗುವುದನ್ನು ನಾನು ರಹಿತ ಪಡಿಸುತ್ತೇನೆ.

**ವಿಶ್ವಾಸರಾವ್**:— ಇಷ್ಟೇ ತಾನೇ ನಿಮ್ಮ ಹೇಳಿಕೆ! (ಎಂದು ಹೇಳಿ ಮೇಜಿನ ಡ್ರಾವನ್ನು ಎಳೆದು ಆದರೊಳಗಿದ್ದ ಕಮಿಟಿಯ ವಾರ್ಷಿಕ

ಮಹಾಸಭೆಯ ವರದಿಯನ್ನು ತೆಗೆದು ) ನೋಡಿರಿ, ಮೂವತ್ತೈದನೇ ಪುಟದ ಲ್ಲಿರುವ ಭಾಷಣವನ್ನು; ಜಾತಿಭೇದದಿಂದ ವ್ಯವಹಾರದಲ್ಲಿ ಆಗುವ ತೊಂದರೆ, ಅದರ ನಿವಾರಣ ಉಪಾಯ ವಗೈರೆ ವಿಷಯಗಳನ್ನು ಎಷ್ಟು ಸರಸವಾಗಿ ವಿಂಗಡಿಸಿದೆ. ಅದೇಕೆ, ನಿಮಗೆ ಓದಿಯೇ ತೋರಿಸುತ್ತೇನೆ. ಅದರಿಂದ ನಿಮಗೆ ಅದರ ವಿಚಾರವು ಸರಿಯಾಗಿ ತಿಳಿಯಬಹುದು, ಎಂದು ಡಾಕ್ಟರ ಸಾಹೇಬರು ಅದನ್ನು ಓದಲು ಪ್ರಾರಂಭಿಸಿದರು.

“ ಈಗ ಈ ಕಮಿಟಿಗೆ ಅಧೀನವಾಗಿ ಅನೇಕ ಶಾಖಾ ಕಮಿಟಿಗಳಿವೆ. ಎಲ್ಲ ಕಮಿಟಿಗಳಲ್ಲೂ ಸೇರಿ ಈ ಸಾರೆ ನಲವತ್ತುಮೂರು ಸಹಪಂಕ್ತಿ ಭೋಜನಗಳಾಗಿವೆ. ಇದು ಅತ್ಯಂತ ಸಮಾಧಾನದ ಮತ್ತು ಅಭಿಮಾನದ ಅಭಿನಂದನೀಯ ಸಂಗತಿಯು. ಈ ಕಾರ್ಯವು ನಿಜವಾಗಿಯೂ ಪ್ರಶಂಸ ನೀಯವಾದದ್ದು ಇರುತ್ತದೆ. ಕಮಿಟಿಗೆ ಇದು ಭೂಷಣವಾದ ಕೆಲಸವು.

ಕಮಿಟಿಯ ವಿರೋಧಕರು ತಮ್ಮ ಪದ್ಧತಿಯ ಪ್ರಕಾರ ಸಹಪಂಕ್ತಿ ಭೋಜನ ಸಂಬಂಧ ಬಹಳವಾಗಿ ಕೂಗಿಕೊಂಡರು. ಆದರೆ ಅವರ ಕೂಗನ್ನು ಕೇಳುವ ಕಾಲವು ಹಿಂದಾಯಿತು. ಪಾಶ್ಚಾತ್ಯ ಶಿಕ್ಷಣದಿಂದ ದೇಶದಲ್ಲಿ ಹೊಸ ಪ್ರಕಾಶವು ಹರಡುತ್ತಿರುವುದು. ಎಲ್ಲರೂ ಒಂದೇ ಆದರು, ಎಂದು ಹೇಳುವ ಕೂಗು ಎಲ್ಲೋ ಅಡಗಿತು. ಜಾತಿಯ ಏಕೀಕರಣದ ದಿವಸಗಳು ಹತ್ತಿರ ಹತ್ತಿರ ಬರಹತ್ತಿವೆ. ವೇದಾಂತದಲ್ಲಿಯೂ ಉಪನಿಷತ್ತುಗಳಲ್ಲಿಯೂ ಜಾತಿ ಭೇದವನ್ನು ಎಲ್ಲಿಹೇಳಿದೆ? ಅವು ಎಲ್ಲರಸಲುವಾಗಿ ನಿರ್ಮಾಣವಾಗಿವೆ. ಅವ ರಲ್ಲಿ ಸಂಕುಚಿತ ಕಲ್ಪನೆಗೆ ಅವಕಾಶವಿಲ್ಲ. ದೇವರ ಕೃಪೆಯಿಂದ ಅವುಗಳ ನಿರ್ಮಾಣವಾಗಿದೆ. ಹಿಂದೂಧರ್ಮಕ್ಕೆ ವೈದಿಕಧರ್ಮ-ವೆಂದು ಹೇಳುತ್ತಾರೆ- ಅದು ಸುಳ್ಳಾಗುವುದೋ? ಮತ್ತು ಅದರಲ್ಲಿರುವ ತತ್ತ್ವಗಳು ಮಾನವರ ಹಿತ ಕ್ಕಾಗಿರುವವು. ಅವರಲ್ಲಿ ಜಾತಿಭೇದ ವರ್ಣಭೇದಗಳಿಗೆ ಅವಕಾಶವಿಲ್ಲ. ಹಿಂದಿನಕಾಲದ ಋಷಿಗಳಲ್ಲಿ ಈಗಿನವರಂತೆ ಕ್ಷುದ್ರತನವೂ ಅನುದಾರತನವೂ ಇರಲಿಲ್ಲ. ಮತ್ತು ಅವರಲ್ಲಿ ಜಾತಿಭೇದ ವರ್ಣಭೇದಗಳು ಇರಲಿಲ್ಲ. ಅಲ್ಲದೆ ಎಲ್ಲ ಮಾನವ ವರ್ಗವು ಒಬ್ಬ ದೇವರ ಮಕ್ಕಳೆಂದು ಅವರ ಮತವಾಗಿತ್ತು. ಆದ್ದರಿಂದಲೇ ಅವರು ವಿಶ್ವಪ್ರೇಮದಲ್ಲಿ ತೇಲಾಡುತ್ತಿದ್ದರು.

ಈಚೆಗೆ ಕೆಲಸ್ವಾರ್ಥಿಗಳಿಂದ ಜಾತಿಭೇದ ಬಹುಜಾತಿಗಳಿಗೆ ಅವಕಾಶವಾಗಿದೆ ಆದೇ ಆಧಾರದಮೇಲೆ ಬರೆದ ಕೆಲವು ಗ್ರಂಥಗಳು ಈ ಹಳೇ ಜನರಿಗೆ ಆಧಾರವಾಗಿವೆ ಈಗಲಾದರೂ ವಿಚಾರಮಾಡಿರಿ. ಮತ್ತು ಕಣ್ಣುತೆರೆಯಿರಿ ಸನಾತನಧರ್ಮದ ಹುಚ್ಚಿನಿಂದ ಕೆಡಬೇಡಿರಿ. ಹಿಂದೂಸಮಾಜದ ಈ ಜಾತಿಭೇದದಷ್ಟು ಹಾನಿಯು ಬೇರೆಯಾವುದರಿಂದಲೂ ಆಗಿರುವುದಿಲ್ಲ. ಉನ್ನತಿಯ ಮಾರ್ಗದಲ್ಲಿ ಜಾತಿಭೇದವೆಂಬುದು ದೊಡ್ಡಗುಡ್ಡದಂತೆ ಅಡ್ಡಬಂದಿರುವುದು. ಈ ಗುಡ್ಡವನ್ನು ತೆಗೆದುಹಾಕಲು ಕದಿಮಾಟಿಯು ಪ್ರಾರಂಭವಾಗಿದೆ. ಮತ್ತು ಅದರಿಂದ ಯಶಸ್ಸು ದೊರೆಯುತ್ತಿರುವುದು. ಈ ಕದಿಮಾಟಿಗೆ ಎಲ್ಲ ಸುಧಾರಿಸಿದ ರಾಷ್ಟ್ರಗಳ ಸಹಾನುಭೂತಿಯು ಸಿಕ್ಕಿರುವುದು ಮತ್ತು ಜಗತ್ತಿನೊಳಗಿರುವ ಎಲ್ಲ ವಿಚಾರವಂತರ ಅನುಮೋದನವಿರುವುದು.

'ತಲೆಯಮೇಲೆ ದೇವರು, ಎದೆಯಲ್ಲಿ ಧೈರ್ಯ' ಇರುವತನಕ ಈಕೆಲಸ ನೆರವೇರಿಸಲು ಹೆದರಿಕೆ ಏನು? ಸನಾತನಧರ್ಮಿಗಳಿಂದು ಜಂಬಬಡಿದುಕೊಳ್ಳುವದರ ಪ್ರೌಳಿಗೆ ಹೆದರಬೇಡಿರಿ. ಜಾತಿಭೇದವೆಂಬದು ಯಾವಾಗಲಾದರೂ ಉದ್ವೇಗವನ್ನುಂಟುಮಾಡುವುದಾಗಿರುತ್ತದೆ. ಮತ್ತು ಅದು ಉಚ್ಚನೀಚ ಭಾವನೆಯ ಪರಿಣಾಮದಿಂದ ಸಮಾಜದಲ್ಲಿ ವಿಕಲ್ಪಪರಿಣಾಮಗಳನ್ನುಂಟುಮಾಡುತ್ತದೆ. ಅಲ್ಲದೆ ವೈರವನ್ನು ಸಂಪಾದಿಸುತ್ತದೆ. ಕ್ರೋಧಾಗ್ನಿಯನ್ನು ಎಬ್ಬಿಸುತ್ತದೆ. ಸಮಾಜದ ಸತ್ವವನ್ನು ನಾಶಪಡಿಸುವುದು. ಅಂಥರಾದ ಸನಾತನ ಧರ್ಮಿಗಳಿಗೆ ಇದರ ಕಲ್ಪನೆ ಬರುವುದಿಲ್ಲವೆಂದು ತಿಳಿಯಬೇಡಿರಿ. ಯಾಕಂದರೆ ತಮ್ಮ ಸ್ವಾರ್ಥಸಾಧಿಸಿಕೊಳ್ಳಲು, ಮತ್ತು ತಮ್ಮ ಹೆಚ್ಚುಗಾರಿಕೆಯನ್ನು ತೋರಿಸಿ ಇತರರನ್ನು ಕಡಿಮೆದರ್ಜೆಯಲ್ಲಿಡಲು ಅನುಕೂಲವಾಗುವುದಿಲ್ಲೆಂಬುವದನ್ನು ತಿಳಿದು ಕದಿಮಾಟಿಯನ್ನು ನಿಂದಿಸುತ್ತಾರೆ. ಅದ್ದರಿಂದ ನೀವು ಜಾಗ್ರತರಾಗಿರಿ! ಎಲ್ಲರೂಪ್ರೂಂದಾಗಿ ದೇವರಮಕ್ಕಳಂತೆ ವರ್ತಿಸಿ, ಹಿಂದೂಸಮಾಜವನ್ನು ಉದ್ಧಾರಮಾಡಿರಿ' ತಿಳಿದೂ ತಿಳಿದೂ ಕೆಡಬೇಡಿರಿ. ಎಲ್ಲರೂ ಒಮ್ಮನಸಿನಿಂದ ಜಾತಿಭೇದವನ್ನು ಮುರಿದು ಹಿಂದೂಸಮಾಜವನ್ನು ಉದ್ಧಾರಮಾಡಿ ಹಿಂದೂಸಮಾಜದಲ್ಲಿ ಐಕ್ಯವನ್ನುಂಟುಮಾಡಿರಿ.'

**ವಿಶ್ವಾಸರಾವ್:—** ಕೃಷ್ಣರಾಯರೇ ಕೇಳಿದಿರಾ?

**ಕೃಷ್ಣರಾವ್**:— ಭಲೆ! ಬಹಳ ಚೆನ್ನಾಗಿದೆ. ಚೆನ್ನಾಗಿ ವಿಚಾರ ಮಾಡಿರುತ್ತೀರಿ. (ಗಂಭೀರಮುದ್ರೆಯಿಂದ) ಕರ್ನಾಟಕಿಯ ಉದ್ದೇಶವು ಬಹಳ ಮಹತ್ವದ್ದಿರುತ್ತದೆ. ಇದು ಕಾರ್ಯರೂಪದಲ್ಲಿ ಬರಬೇಕಾದರೆ ಪ್ರತಿಯೊಬ್ಬ ಮನುಷ್ಯನು ತನು ಮನ-ಧನಗಳನ್ನು ಖರ್ಚ ಮಾಡಬೇಕಾಗುತ್ತದೆ. ಸುಮ್ಮನೆ ಸರಸ್ವತಿ ಪ್ರಸನ್ನ ಮಾಡುವುದರಿಂದ ಪ್ರಯೋಜನವಿಲ್ಲ.

**ವಿಶ್ವಾಸರಾವ್**:— ಕರ್ನಾಟಕಿಯ ಉದ್ದೇಶವಾದರೂ ಅದೇ ಇರುವುದು. ಈ ಉದ್ದೇಶವನ್ನು ನೆರವೇರಿಸಲು ವಕ್ತೃತ್ವ-ಕರ್ತೃತ್ವಶಾಲಿಗಳ ಅವಶ್ಯಕತೆಯು ಕರ್ನಾಟಕಿಗೆ ಅವಶ್ಯವಾಗಿ ಬೇಕಾಗಿದೆ. ನೀವು ಸ್ತ್ರೀ ಶಿಕ್ಷಣದ ಕಾರ್ಯವನ್ನು ಕೇಳಲಿಲ್ಲ. ಕರ್ನಾಟಕಿಯಲ್ಲಿ ಆ ಸಂಬಂಧ ಬರೆದ ಉಪನ್ಯಾಸವನ್ನು ಹೇಳತಕ್ಕ ಅಧಿಕಾರಯುಕ್ತ ಮಹಿಳೆಯ ಉಪನ್ಯಾಸವಿದೆ. ಅದನ್ನು ಸ್ವಲ್ಪ ಓದಿ ಹೇಳುತ್ತೇನೆ, ಕೇಳಿರಿ.

**ಕೃಷ್ಣರಾವ್**: - ಓದಿ? ನೋಡೋಣ

(ವಿಶ್ವಾಸರಾಯರು ಓದಲು ಪ್ರಾರಂಭಿಸಿದರು.) " ಸ್ತ್ರೀ ಶಿಕ್ಷಣದ ರಹಾವನ್ನು ಓದಿ ಹೇಳುವ ಸಮಯವನ್ನು ನನಗೆ ಕೊಟ್ಟದ್ದರಿಂದ ಅದು ನನ್ನ ಭಾಗ್ಯವೆಂದು ತಿಳಿಯುತ್ತೇನೆ. ಇಷ್ಟು ಕಷ್ಟಕರವಾದ ಮತ್ತು ತೊಡಕಾದ ಮತ್ತು ಮಹತ್ವದ ಅಲ್ಲದೆ ಕಲ್ಯಾಣಕರವಾಗಿಯೂ ಉಪಯುಕ್ತವಾಗಿಯೂ ಇರುವ ಸರಳವಾದ ವಿಷಯವು ಬೇರೊಂದಿರಲಿಕ್ಕಿಲ್ಲ. ಸ್ತ್ರೀ ಶಿಕ್ಷಣಕ್ಕೆ ಸನಾತನಿಗಳೆಂದು ಹೇಳಿಸಿಕೊಳ್ಳುವವರಿಂದ ಯಾವಾಗಲೂ ಆಕ್ಷೇಪ ಬಂದೇ ಬರುತ್ತವೆ. ಅವರೆ ಅವರು ಸ್ತ್ರೀಯರಿಂದಲೇ ಸಮಾಜವು ಉದ್ಧಾರವಾಗುತ್ತದೆಂಬುದನ್ನು ಮರೆತಿರುತ್ತಾರೆ. ಪಾಪ. ಇದು ಆ ಅಜ್ಞಾನಿಗಳಿಗೆ ಹೇಗೆ ತಿಳಿದೀತು? ಅವಿದ್ಯಾವಂತರಿಗೆ ಈ ವಿಚಾರ ಬೇಗನೆ ತಿಳಿಯುವುದಿಲ್ಲ. ಸನಾತನಿಗಳಲ್ಲಿ ಸಾವಿರಕ್ಕೆ ಒಬ್ಬರಾದರೂ ಪದವೀಧರರಿರುವರೇನು? ಇಲ್ಲ ಎಲ್ಲರೂ ಅರ್ಧಮರ್ಧಶಿಕ್ಷಿತರು, ಕುಶಿಕ್ಷಿತರು ಅಥವಾ ಅಶಿಕ್ಷಿತರೇ? ಇಂಥವರಿಗೆ ಈ ಮಹತ್ವದ ವಿಚಾರ ತಿಳಿಯುವ ಬಗೆಹೇಗೆ! ಅವರು ಅಪ್ಪನೆಟ್ಟ ಆಲದಮರವೆನ್ನುವರು. ಇಂಥ ಕೆಲವು ವ್ಯಕ್ತಿಗಳೇ ಸಮಾಜದ ಮೇಲೆ ತಮ್ಮ ಅಧಿಕಾರವನ್ನು ಬಜಾಯಿಸುತ್ತಿರುತ್ತಾರೆ. ಮತ್ತು ಕರ್ನಾಟಕಿಯ ಕೆಲ

ಸಕ್ಕೆ ಅಂಥವರಿಂದಲೇ ಕಂಟಕಗಳು ಒದಗುತ್ತಿವೆ. ವಿಚಾರಮಾಡಿ ನೋಡಿರಿ, ಪ್ರೌಢವಿವಾಹಕ್ಕೆ ಶಾಸ್ತ್ರರೀತಿ ಸಮ್ಮತಿಯದೆ; ಅಥವಾ ಇಲ್ಲವೆನ್ನಿ. ಇಲ್ಲವೆಂದು ತಿಳಿಯೋಣ. ಆ ಶಾಸ್ತ್ರವನ್ನು ನಮ್ಮಂತೆಯೇ ಎರಡು ಕಣ್ಣು, ಎರಡುಕಿವಿ, ಎರಡುಕಾಲು ಇರುವ ಮನುಷ್ಯರೇ ಬರೆದಿರುವರಲ್ಲವೇ? ನಾವಾದರೂ ಗಣಿತಶಾಸ್ತ್ರ, ಭೂಗೋಳಶಾಸ್ತ್ರ, ಭಾಷಾಶಾಸ್ತ್ರ, ವ್ಯಾಕರಣಶಾಸ್ತ್ರ ಇಂಥ ಶಾಸ್ತ್ರಗಳನ್ನು ಬರೆಯಬಹುದು ಮತ್ತು ಇವುಗಳನ್ನು ವಿಶ್ವವಿದ್ಯಾನಿಲಯವು ಮಾನ್ಯಮಾಡುತ್ತದೆ. ಆದರಂತೆ ಸ್ತ್ರೀ ಶಿಕ್ಷಣವೂ ಧರ್ಮಶಾಸ್ತ್ರದ ಒಂದು ಭಾಗವಾಗಿರುವುದು. ಆದಕಾರಣ ಶಾಸ್ತ್ರಾಧಾರವಾಗಿಯೇ ನಾವೇಕೆ ಪ್ರೌಢವಿವಾಹ ಸ್ತ್ರೀಶಿಕ್ಷಣದ ಮೇಲೆ ಗ್ರಂಥಗಳನ್ನು ಬರೆಯಬಾರದು? ಖಂಡಿತ ಬರೆಯಬಹುದು. ಸಾರಾಂಶವೇನಂದರೆ– ಲೋಕದಜನರ ಬಾಯಿಗೆ ಹೆದರಿ ಸುಮ್ಮನೆ ಕೂಡ್ರುವದು ಸರಿಯಲ್ಲವೆಂದು ನನಗೆ ತೋರುವುದು ಕಾರಣ ನಾವು ಹೊಸ ಶಾಸ್ತ್ರವನ್ನು ತಯಾರಿಸಲೇಬೇಕು. ಅದರಲ್ಲಿ ಸ್ತ್ರೀಯರ ಲಗ್ನದ ಅವಧಿಯನ್ನು ಇಪ್ಪತ್ತುವರ್ಷಕ್ಕೆ ಹೆಚ್ಚಿಸಬೇಕು. ಈಗಲೇ ರೂಢಿಯಲ್ಲಿ ಹದಿನಾಲ್ಕು ವರ್ಷವಿದೆ. ನಮ್ಮ ಕಮಿಟಿಯಲ್ಲಿ ಇಪ್ಪತ್ತುವರ್ಷವೆಂದು ತೀರ್ಮಾನವಾದ ಕೂಡಲೇ ನಿಧಾನ ಹದಿನಾರುವರ್ಷಕ್ಕಾದರೂ ಜನರೂಢಿಯಾಗಿ ಬರುವುದು. ಅದರಲ್ಲಂತೂ ನಮ್ಮ ಸುಧಾರಕ ಪದವೀಧರರು ಒಂದೆರಡು ಲಗ್ನಗಳನ್ನು ಮಾಡಿದರ ಸಾಕು. "ಮಹಾಜನೋಯೇನ ಗತಸ್ಸಪಂಥಾಃ" ಎಂಬಂತೆ ಈ ಇಪ್ಪತ್ತನೇ ಶತಮಾನದಲ್ಲಿ ಕೂಡಲೆ ಆಚರಣೆಗೆ ಬರುವುದು. ಆ ಮೇಲೆ ಕಮಿಟಿಯಲ್ಲಿ ಅದರ ಅವಧಿಯನ್ನು ಇನ್ನೂ ಹೆಚ್ಚಿಸಬಹುದು. ನನಗೆ ಹೀಗೆ ತಿಳಿಯುತ್ತದೆ. ಬಾಲಕಿಯರಿಗೆ ಲಗ್ನಮಾಡಲೇಬೇಕೆಂಬ ಒತ್ತಾಯವಾದರೂ ಏಕೆ ಇರಬೇಕು? ಲಗ್ನದವಿಚಾರದಲ್ಲಿ ಅವರಿಗೆ ಸ್ವತಂತ್ರತೆಯು ಯಾಕಿರಬಾರದು? ಅವರ ಲಗ್ನದ ವಿಚಾರದ ಮರ್ಯಾದೆಯನ್ನು ನಾವು ಚರ್ಚಿಸುವುದು ಅವರ ನೈಜವಾದ ಹಕ್ಕನ್ನು ನಾವು ಅಪಹರಿಸಿದಂತೆ ಆಗುವುದಿಲ್ಲವೇ? ಪಾಶ್ಚಿಮಾತ್ಯ ಹೆಂಗಸರಂತೆ ನಮ್ಮ ಹೆಂಗಸರು ಇನ್ನೂ ಜಾಗ್ರತರಾಗಿಲ್ಲವೆಂದು ಅವರ ಹಕ್ಕನ್ನು ನಾವು ಭಂಗಪಡಿಸುವುದು ನ್ಯಾಯವಲ್ಲ." (ಡಾಕ್ಟರರು ಭಾಷಣದ ನಕಲನ್ನು ಮೇಜಿನ ಮೇಲಿಟ್ಟು) ಹ್ಯಾಗದೆ? ಈಗಾದರೂ ಖಾತ್ರಿಯಾಯಿತೇ? ಎಂದು ನಗುತ್ತಾ ಕೇಳಿದರು.

**ಕೃಷ್ಣರಾವ್**:— ವಿಷಯವೇ ಗಂಭೀರವಾದದ್ದು. ಅದರಲ್ಲೂ ಒಳ್ಳೇ ವಿಚಾರದಿಂದ ಬರೆದಿರುತ್ತಾರೆ. ಅಂದಮೇಲೆ ಖಾತ್ರಿಯಾಗದೇನುಮಾಡೀತು!

**ವಿಶ್ವಾಸರಾವ್** :— ( ಪುಸ್ತಕದ ಪುಟಗಳನ್ನು ತೆಗೆಯುತಾ ಕುತ್ತ ) ವಿವಾಹಸಂಬಂಧವಾದ ಭಾಷಣಗಳನ್ನು ಕೇಳಿದರೆ ಕಲ್ಲುಕೂಡ ಬಾಯಿಬಿಡ ಬಹುದು. ಮತ್ತು ಆಲಸ್ಯಗೇಡಿಗಳಿಗೆ ಕೆಲಸಮಾಡುವ ಉಮೇದು ಬರ ಬಹುದು. ಆ ರೀತಿ ಒಳ್ಳೇ ಗಂಭೀರವಾಗಿರುತ್ತದೆ! ಎಂದು ಹೇಳಿದರು.

**ಕೃಷ್ಣರಾವ್**:— (ಉತ್ಸಾಹದಿಂದ) ಹಾಗಾದರೆ ಖಂಡಿತ ಅದನ್ನು ಓದಲೇಬೇಕು.

ವಿಶ್ವಾಸರಾಯರು ಅದನ್ನು ಓದಲಾರಂಭಿಸಿದರು—

ಮಹಾಶಯರೇ ಕೇಳಿ ನಾವು ರೂಢಿಯ ದಾಸರಾಗಿರುತ್ತೇವೆ. ವಿಚಾರಕ್ಕಿಂತಲೂ ರೂಢಿಯೇ ಯಾವಜನಾಂಗದಲ್ಲಿ ಹೆಚ್ಚಾಗಿದೆಯೋ ಆದೇಶವು ಅಥವಾ ಜನಾಂಗವು ಖಂಡಿತ ರಸಾತಳಕ್ಕೆ ಇಳಿಯುವದು ಪಾಶ್ಚಾತ್ಯ ಸಂಸ್ಕೃತಿಯು ತಿಳಿವಳಿಕೆಯಾಗಿ ಜ್ಞಾನಪ್ರಕಾಶವು ನಮ್ಮ ತಲೆ ಯಲ್ಲಿ ಸೇರಲಾರಂಭಿಸಿರುವುದು ದೇವರ ದಯವೆಂದೇ ಹೇಳಬೇಕಾಗಿದೆ. ಇಲ್ಲದಿದ್ದರೆ ನಮ್ಮ ಸ್ತ್ರೀವರ್ಗವು ನಾಶವಾಗಿಹೋಗುತ್ತಿತ್ತೆಂದು ಹೇಳಬಹುದು. ಗುಲಾಮರ ವ್ಯಾಪಾರವು ಎಲ್ಲ ದೇಶಗಳಲ್ಲಿ ನಿಂತುಹೋಗಿರುವುದು. ಆದರೆ ನಮ್ಮ ಹಿಂದೂಸಮಾಜದಲ್ಲಿ ಪ್ರತ್ಯಕ್ಷವಾಗಿ ಅದು ನಡೆದಿರುತ್ತದೆ. ಹೆಂಗಸರ ಸ್ಥಿತಿಯು ಗುಲಾಮರಿಗಿಂತಲೂ ಚನ್ನಾಗಿರುವುದೆಂದು ಅಂತಃಕರುಣವುಳ್ಳ ಮನುಷ್ಯನು ಹೇಳಬಹುದೇ? ಅವರಿಗೆ ಯಾವಾಗಲೂ ಬಂಧನವೇ? ಬಾಲ್ಯ ದಲ್ಲಿ ತಾಯಿತಂದೆಗಳ ಅಧೀನ ಮತ್ತು ಲಗ್ನವಾದಮೇಲೆ ಪತಿಯ ಆಧೀನ. ಆವನು ಸತ್ತಮೇಲೂ ಪರತಂತ್ರವೇ. ' ನ-ಸ್ತ್ರೀಸ್ವಾತಂತ್ರ್ಯ ಮರ್ಹತಿ. ' ಹೀಗೆಯೇ ಹಳೇಜನರು ಹೇಳುತ್ತಿರುತ್ತಾರೆ. ನಾನು ಈ ಜನರಿಗೆ ಹೀಗೆ ಕೇಳುತ್ತೇನೆ. ನಾಳಿನ ದಿವಸವೇ ಸ್ತ್ರೀಯರೆಲ್ಲಸೇರಿ 'ನ-ಪುರುಷಃ ಸ್ವಾತಂತ್ರ್ಯ ಮರ್ಹತಿ' ಎಂದು ತಮ್ಮ ಕಮಿಟಿಯಲ್ಲಿ ಪಾಸುಮಾಡಿದರೆ ಆಗೇನು ಮಾಡು ವರು ? ನೀವು ಮಾತ್ರ ಹೊಸಹೊಸ ಹಕ್ಕುಗಳನ್ನು ಸಂಪಾದಿಸಲು ಚಳವಳಿ ಎಬ್ಬಿಸುತ್ತೀರಿ ಅವರಿಗೇಕೆ ಈ ಹಕ್ಕಿಲ್ಲ? ನಿಮಗೆ ಮಾತ್ರ ಸ್ವತಂತ್ರತೆಬೇಕು!

ಸ್ತ್ರೀಯರಿಗೆ ಬಿಡವ್ರೋ? ಒಬ್ಬ ಹೆಂಡತಿ ಸತ್ತರೆ ಎರಡನೇ ಮೂರನೇ ಲಗ್ನ ಮಾಡಿಕೊಳ್ಳಲಿಕ್ಕೆ ನಿಮಗೆ ಹಕ್ಕಿದೆ! ಸ್ತ್ರೀಯರಿಗೆ ಮಾತ್ರ ಅದು ಇರುವುದಿಲ್ಲ. ಇದು ನ್ಯಾಯವೇ? ನೋಡಿ, ಮಾನವನೀತಿ ಹೇಗಿದೆ. ಗಂಡನು ತೀರಿಕೊಂಡರೆ ಸ್ತ್ರೀಯರಿಗೆ ಸನ್ಯಾಸವು ಪ್ರಾಪ್ತವಾಯಿತು! ಪುರುಷರಂತೆ ಅವರು ಮನುಷ್ಯರಲ್ಲವ್ರೋ? ಅವರಿಗೆ ಮಾನವನ ಮನೋವಿಕಾರಗಳು ಇರುವವ್ರೋ ಇಲ್ಲವ್ರೋ? ಅವರಿಗೆ ಅಂತಃಕರಣವಿಲ್ಲವ್ರೋ ಅವರಿಗೆ ಕೈ-ಕಾಲು-ಕಣ್ಣು ಮುಂತಾದ ಅವಯುವಗಳಿಲ್ಲವೇನು? ಪುರುಷರಂತೆ ಅವರೂ ಆಹಾರ ಸ್ವೀಕರಿಸುವುದಿಲ್ಲವೇ, ಆಹಾರದ ಪರಿಣಾಮವು ಗಂಡಸರ ಮೇಲೆ ಯಾವರೀತಿ ಆಗುವುದೋ ಅದೇರೀತಿ ಆಗುವುದಿಲ್ಲವೇ? (ಕೇಳಿರಿ! ಕೇಳಿರಿ!) ಕಾಲಮಾನದ ಮತ್ತು ಹವಾಮಾನದ ಪರಿಸ್ಥಿತಿಯು ಅವರಮೇಲೂ ಆಗುವುದಿಲ್ಲವೇ? ಆನಂದದ ನೋಟವನ್ನು ನೋಡಿ ಅವರಿಗೂ ಆನಂದವಾಗುವುದಲ್ಲವೆ? ದುಃಖದ ನೋಟವನ್ನು ನೋಡಿದರೆ ಅವರಿಗೂ ಕಣ್ಣೀರು ಬರುವುದಲ್ಲವೇ? ಹಾಗಾದರೆ ಅವರಿಗೂ ಪುರುಷರಂತೆ ಮನೋವಿಕಾರ ಮತ್ತು ವಾಸನೆಗಳು ಇರುತ್ತವಲ್ಲವೇ? ಹಾಗಂದಮೇಲೆ ಅವರ ಮನೋವಿಕಾರವನ್ನೂ ವಾಸನೆಯನ್ನೂ ಅಲ್ಲೇ ಅಮುಕುವ ಶಕ್ತಿಯ–ಜುಲುಮೆ ಏಕೆ? ಇದು ಪುರುಷರ ಜುಲುಮೆಯಲ್ಲವೇ? ಸ್ತ್ರೀಯರಿಗೆ ಮನೋವಿಕಾರವಿಲ್ಲ! ಸಂತೋಷವಿಲ್ಲ! ದುಃಖವಿಲ್ಲ! ಸುಖವಿಲ್ಲ! ಅವರು ಕಲ್ಲಿನಂತೆ ಅಚೇತನವಾಗಿರುತ್ತಾರೆಂದು ಶಾಸ್ತ್ರಕಾರರ ಅಭಿಪ್ರಾಯುವ್ರೋ ಹ್ಯಾಗೆ? ಇಂಥ ಹುಚ್ಚು ತಿಳುವಳಿಕೆಗೆ ಅವಕಾಶವು ಈಗ ಕಡಿಮೆಯಾಗುತ್ತ ಬಂದಿರುವುದು. ಪಾಶ್ಚಾತ್ಯರ ಸಹವಾಸದಿಂದ ತಮ್ಮ ನಿಜವಾದ ಹಕ್ಕಿನ ವಿಷಯುವು ತಿಳಿಯುತ್ತ ಬಂದಿರುತ್ತದೆ. ಮಹಿಲಾ ಸಮಾಜದಂಥ ಸ್ತ್ರೀಯರ ಸಂಘಗಳು ಪ್ರಾರಂಭವಾಗಿ ತಮ್ಮ ಹಕ್ಕಿಗೋಸ್ಕರವಾಗಿ ಪುರುಷರ ಸಂಗಡ ಹೋರಾಡುವ ಸಮಯವು ಬಂದಿರುತ್ತದೆ. "ನನ್ನ ಕೋಳಿಯಿಂದಲೇ ಬೆಳಗಾನುತ್ತದೆಂಬ" ದಿವಸಗಳು ಹಿಂದಾದವು. ಅವರು ತಮ್ಮ ಸುಖದುಃಖಗಳನ್ನು ತಾವೇ ಸರಿಪಡಿಸಿಕೊಳ್ಳಲು ತಯಾರಾಗಿದ್ದಾರೆ. ಯಾರಾದರೂ ಸ್ತ್ರೀ ಶಿಕ್ಷಣಕ್ಕೆ ಅಡ್ಡಬಂದರೆ ಪುರುಷವರ್ಗವೇ ಅಪಮಾನಮಾಡಿಸಿಕೊಳ್ಳಬೇಕಾದೀತು. ಕಾರಣ ದೂರದೃಷ್ಟಿಯಿಂದ ವಿಚಾರಮಾಡಿ ಇಂಥ ಸುಧಾರಣೆಯ ಕೆಲಸಗಳನ್ನು ಕಮಿಾಟಿಯು

ಮಾರ್ಗವಾಗಿ ಗಂಡಸರ ಕಡೆಯಿಂದಲೇ ಉಪಕ್ರಮವಾಗುವದು ತುಂಬಾ ಸಂತೋಷದ ಸಂಗತಿಯಾಗಿದೆ. ಹೋದವರ್ಷ ಬರೇ ಐದು ಪುನರ್ವಿವಾಹ ಗಳು ಮಾತ್ರ ನಡೆದಿರುತ್ತವೆ. ಈ ಸಂಗತಿಯು ಅಷ್ಟೇನು ತೃಪ್ತಿಕರವಾಗಿರ ದಿದ್ದರೂ ಮುಂದಿನ ವರ್ಷದ ಕೆಲಸಕ್ಕೆ ಉಮೇದುಕೊಡತಕ್ಕಂಥದಾಗಿದೆ. ಸ್ತ್ರೀದಾಕ್ಷಿಣ್ಯ, ಭೂತದಯೆಯ ದೃಷ್ಟಿಯಿಂದ ಪ್ರತಿಯೊಬ್ಬ ತರುಣರೂ ವಿಧವಾ ವಿವಾಹವಾಗುವಂತೆ ಪ್ರಯತ್ನಿಸಬೇಕಾಗಿ ನನ್ನ ಪ್ರಾರ್ಥನೆ. ........

( ಓದತಕ್ಕ ವಿಷಯವು ಇನ್ನೂ ಇತ್ತು. ಅದನ್ನು ತಡೆದು )

ಕೃಷ್ಣರಾಯರು ನೀವು ಹೇಳುವಂತೆ ಎಲ್ಲ ಸಂಗತಿಯೂ ನಿಶ್ಚಯವಾದದ್ದು. ಎಲ್ಲ ಜಾತಿಗಳನ್ನೂ ಒಟ್ಟುಗೂಡಿಸುವದು, ಬಾಲಿಕೆಯರ ಲಗ್ನದ ಅವಧಿಯನ್ನು ಹೆಚ್ಚಿಸುವುದು, ವಿಧವಾ ವಿವಾಹ ಇವುಗಳನ್ನು ಆದಷ್ಟು ಬೇಗನೆ ಅಭಿವೃದ್ಧಿಗೆ ತರಬೇಕೆಂಬುದು ನನ್ನ ಮನಸ್ಸಿಗೆ ಚನ್ನಾಗಿ ನಾಟಿತು.

(ವಿಶ್ವಾಸರಾಯರು ಮತ್ತೆ ಓದಲಾರಂಭಿಸಿದರು.) ಕಮಿಟಿಯ ಉದ್ದೇಶ ಗಳು ಇಷ್ಟೇ ಅಲ್ಲದೆ ಅಸ್ಪೃಶ್ಯರ ಉದ್ಧಾರ, ಅನಾಥ ಬಾಲಕ ಬಾಲಕಿಯರ ಆಶ್ರಮ ವಗೈರೆ ನಡೆಸಿದ ಕೆಲಸಗಳೂ ಸಮಾಜದ ಉದ್ಧಾರಕ್ಕೂ ಭೂತ ದಯೆಗೂ ಆಶ್ರಯವಾಗಿವೆ. ಈ ಕೆಲಸಗಳು ಅಷ್ಟು ಮುಂದುವರೆದಿಲ್ಲವೆಂ ಬುದೇನೋ ನಿಜ. ಕೆಲಸಮಾಡುವ ಉತ್ಸಾಹೀ ತರುಣರಿಲ್ಲದೆ ಈ ಕೆಲಸ ಗಳು ಸ್ವಲ್ಪ ಹಿಂದೆ ಬಿದ್ದಿವೆ. ಪ್ರತಿಫಲವಿಲ್ಲದೆ ಕೆಲಸ ಮಾಡುವ ಯುವ ಕರು ಮುಂದೆ ಬಂದು ಈ ಕೆಲಸಗಳನ್ನು ಸಾಗಿಸಬಹುದು"

**ಕೃಷ್ಣರಾವ್:**— ನಿಜ! ಆದರೆ ಕಮಿಟಿಯ ಇದುವರೆಗಿನ ಅಭಿ ವೃದ್ಧಿಯನ್ನು ನಾನು ನೋಡಬೇಕಾಗಿದೆ.

**ವಿಶ್ವಾಸರಾವ್:**—ಇಗೋ ನೋಡಿರಿ. ಕಮಿಟಿಯು ಪ್ರಾರಂಭವಾದ ಲಾಗಾಯ್ತು ಇದುವರಗೆ ನಡೆದ ಕಾರ್ಯಗಳ ತಪಶೀಲ್ ಗೋಷ್ವಾರೆಯಾಗಿ ಅಂಕೆಗಳಿಂದ ಭರ್ತಿಮಾಡಿದೆ. ( ಎಂದು ಪುಸ್ತಕವನ್ನು ಕೃಷ್ಣರಾಯರಿಗೆ ಕೊಟ್ಟರು. )

ಸಮಗ್ರ ಪುಸ್ತಕವನ್ನು ಓದಿದ ಮೇಲೆ ಕೃಷ್ಣರಾಯರಿಗೆ ಕಮಿಟಿಯ ಕಾರ್ಯ, ಶಿಸ್ತು ವಗೈರೆ ವಿಷಯದಲ್ಲಿ ಅನುಮಾನವುಳಿಯಲಿಲ್ಲ. ಸಮಾಜ ಸೇವೆಮಾಡಬೇಕಾದರೆ ಈ ಕಮಿಟಿಯು ಉತ್ಕೃಷ್ಟಸಾಧನೆಯಾಗಿದೆ ಎಂದು ಅವರಿಗೆ ನಂಬಿಗೆಯಾಯಿತು. ಮಾರನೇ ದಿವಸವೆ ಅವರು ಸಭೆಯ ಸದಸ್ಯರಾದರು.

---

## ೫ನೆಯ ಪರಿಚ್ಛೇದ.

---

### ನಿರ್ಮಲೆಯ ವಿದ್ಯಾಭ್ಯಾಸ.

ಕೃಷ್ಣರಾಯರು ಕಮಿಟಿಗೆ ಸೇರಿದಾಗ ನಿರ್ಮಲೆಗೆ ಏಳುವರ್ಷ. ಅವರಿಗೆ ಇವಳೊಬ್ಬಳೇ ಮಗಳು ಮತ್ತು ಅವಳಾದರೂ ಬಹಳ ದಿವಸಕ್ಕೆ ಹುಟ್ಟಿದವಳು. ಕಾರಣ ಆಕೆಯಮೇಲೆ ಕೃಷ್ಣರಾಯರ ಪ್ರೀತಿಯು ಬಹಳ. ಚಿಕ್ಕಂದಿನಿಂದಲೂ ಆಕೆಯ ಚಟುವಟಿಕೆ, ಚತುರತೆಯನ್ನು ನೋಡಿ ಇವಳಿಗೆ ಸರಿಯಾಗಿ ವಿದ್ಯಾಭ್ಯಾಸ ಮಾಡಿಸಬೇಕೆಂದು ವಿಚಾರ ಮಾಡಿದ್ದರು. ಆದರೆ ಅತಿ ಪ್ರೇಮದಿಂದ ಇದೂವರೆಗೆ ಆಕೆಯ ಶಿಕ್ಷಣಕ್ಕೆ ಪ್ರಾರಂಭಮಾಡಿದ್ದಿಲ್ಲ ಅಲ್ಲದೆ ಇನ್ನೊಂದು ಕಾರಣವೂ ಇತ್ತು. ರಾಧಾಬಾಯಿಯು ಹಳೇ ನಡತೆಯವರಾಗಿದ್ದರು ಯಾವಾಗಲಾದರೂ ಕೃಷ್ಣರಾಯರು ನಿರ್ಮಲೆಗೆ ಸ್ಕೂಲಿಗೆ ಸೇರಿಸಬೇಕೆಂದು ಮಾತುತೆಗೆದರೆ ಹೆಣ್ಣುಹುಡಿಗೆಗೆ ಕಲಿಸಿ ಏನು ಮಾಡಬೇಕು. ಪೆರೆ ಮನೆಗೆ ಹೋಗುವ ಹೆಣ್ಣುಮಕ್ಕಳಿಗೆ ಎಷ್ಟುಕಲಿಸಿದರೂ ಅಷ್ಟೇ, ಅಲ್ಲಿಗೆ ಹೋದನಂತರ ಅವಕ್ಕೆ ಗೌರವಶಿಕ್ಷರೆ ಒಳ್ಳೇದಾಯಿತು; ಇಲ್ಲವಾದರ ಅವರಿಂದಲೂ ಸಹಸ್ರನಾಮುಗಳನ್ನು ಹೇಳಿಸಿಕೊಳ್ಳಬೇಕಾಗುವದು. ಎಂದು ಹೇಳಿ ಕೃಷ್ಣರಾಯರ ಉತ್ಸಾಹವನ್ನು ಕಳೆದು ಬಿಡುತ್ತಿದ್ದರು. ಒಬ್ಬಳೇ ಮಗಳಾದ್ದರಿಂದ ಹೆಚ್ಚಿಗೆ ಹೇಳುವುದಕ್ಕೂ ಬರುವಂತಿರಲಿಲ್ಲ. ಆದರೆ ಕಮಿಟಿಯ ಠರಾವಿನಂತೆ ಸ್ತ್ರೀ ಶಿಕ್ಷಣಕ್ಕೆ ಮಹತ್ವವಿದ್ದಿತು; ಅಲ್ಲದೆ ತಾವು ಕಮಿಟಿಯ ಮೆಂಬರರಾಗಿ ತಮ್ಮ ಬಾಲಿಕೆಗೆ ವಿದ್ಯೆಕಲಿಸದಿರುವುದು ಒಳ್ಳೆಯದಲ್ಲವೆಂದು ತಿಳಿದು, ಆಕೆಗೆ ಶಾಲೆಗೆ ಕಳಿಸಬೇಕೆಂದು ನಿಶ್ಚಯಿಸಿದರು.

ರಾಧಾಸದನಕ್ಕೆ ಹತ್ತಿರವಾಗಿ ಹೆಣ್ಣುಹುಡುಗಿಯರ ಶಾಲೆಯು ಇರಲಿಲ್ಲ ಆದ್ದರಿಂದ ಮನೆಯಲ್ಲಿಯೇ ವಿದ್ಯೆಕಲಿಸಲು ಪ್ರಾರಂಭಿಸಿದರು. ಮೊದಲು ಮೊದಲು ನಿರ್ಮಲೆಯು ಕಲಿಯುವುದರಲ್ಲಿ ಉತ್ಸಾಹವನ್ನು ತೋರಿಸಲಿಲ್ಲ. ಐದಾರು ತಿಂಗಳಾದಮೇಲೆ ಆಕೆಯ ಲಕ್ಷವು ವಿದ್ಯಾಭ್ಯಾಸದ ಕಡೆಗೆ ತಿರುಗಿ, ತಿಳವಳಿಕೆ ಬರಲು ಪ್ರಾರಂಭವಾಯಿತು. ಆಗ ಕೇವಲ ಉತ್ಸಾಹದಿಂದ ಪಾಠಕಲಿಯಲು ಮೊದಲು ಮಾಡಿದಳು ಕೃಷ್ಣರಾಯರಿಗೆ ಸಂತೋಷವಾಗಿ ಅವರೂ ಮುತುವರ್ಜಿಯಿಂದ ಕಲಿಸಲು ಪ್ರಾರಂಭಿಸಿದರು. ಆದರೆ ಕಮಿಟಿಯ ಕೆಲಸವನ್ನು ತಾವಾಗಿಯೇ ತಮ್ಮ ಮೇಲೆ ಹೆಚ್ಚು ಹೆಚ್ಚು ತೆಗೆದು ಕೊಂಡದ್ದರಿಂದ ಹುಡುಗಿಯ ಶಿಕ್ಷಣದಕಡೆಗೆ ಲಕ್ಷ್ಯವು ಕಡಿಮೆಯಾಯಿತು. ಕಾರಣ ಒಬ್ಬ ಖಾಸಗಿ ಉಪಾಧ್ಯಾಯರನ್ನು ನೇಮಿಸಿಕೊಂಡರು. ಸುಮಾರು ಎರಡುವರ್ಷದಲ್ಲಿ ನಿರ್ಮಲೆಯು ನಾಲ್ಕನೆಯ ತರಗತಿಯಲ್ಲಿ (ಕನ್ನಡಭಾಷೆ) ಓದುವ ಅಭ್ಯಾಸವನ್ನು ಮುಗಿಸಿದಳು.

ನಿರ್ಮಲೆಯು ನಾಲ್ಕನೆಯ ತರಗತಿಯ ಅಭ್ಯಾಸವು ಮುಗಿದ ಮೇಲೆ ಬಾಲಕಿಯ ಮುಂದಿನ ವಿದ್ಯಾಭ್ಯಾಸದ ವಿಚಾರದ ಚಿಂತೆಯು ಕೃಷ್ಣರಾಯರಿಗೆ ಉಂಟಾಯಿತು. ಇಂಗ್ಲೀಷ್ ಕಲಿಸುವ ವಿಚಾರ ಮನೆಯಲ್ಲಿ ಹೇಳುವ ಹಾಗಿರಲಿಲ್ಲ. ಯಾಕಂದರೆ ಕಮಿಟಿಯಲ್ಲಿದ್ದ ಅನೇಕ ಸ್ತ್ರೀಯರು ಆಗಾಗ ಮನೆಗೆ ಬರುತ್ತಿದ್ದರು. ಅವರ ಮಾತುಗಳೂ ಉಡುಗೆ ತೊಡಿಗೆಗಳೂ ನವೀನ ನಮೂನೆಯವುಗಳಾಗಿದ್ದುದನ್ನು ನೋಡಿದ ರಾಧಾಬಾಯಿಗೆ ಸ್ತ್ರೀ ಶಿಕ್ಷಣದಲ್ಲಿ ಬೇರೆ ಅಭಿಪ್ರಾಯವು ನೆಲೆಗೊಂಡುಬಿಟ್ಟಿತ್ತು. ಅದನ್ನು ಆಗಾಗ ಬಾಯಿ ಬಿಟ್ಟು ಹೇಳಿ ತೋರಿಸುತ್ತಿದ್ದರು. ರಾಧಾಬಾಯಿಯವರು ಕೇವಲ ಹಳೇ ಪದ್ಧತಿಯವರಾಗಿದ್ದರು. ಅವರಿಗೆ ಸ್ವಲವೂ ಓದು ಬರಹ ಬರುತ್ತಿರಲಿಲ್ಲ. ಆದರೂ ಅವರು ವ್ಯವಹಾರದಲ್ಲಿ ಚತುರರೂ, ಧೂರ್ತಲಕ್ಷಣವುಳ್ಳವರೂ ಆಗಿದ್ದರು. ಕೃಷ್ಣರಾಯರಿಗೆ ಹೆಂಡತಿಯ ಮೇಲೆ ಬಹಳ ವಿಶ್ವಾಸವಿತ್ತು. ಆದರೆ ಕಮಿಟಿಗೆ ಸೇರಿದ ಲಾಗಾಯತು ಹೆಂಡತಿಯ ಅವಿದ್ಯೆಗೋಸ್ಕರ ವ್ಯಥೆ ಉಂಟಾಗುತ್ತಿತ್ತು. ಮತ್ತು ಹೆಂಗಸರು ವಿದ್ಯಾವಂತರಾಗಿರಬೇಕು. ಅಂಥ ಸಂಸಾರದಲ್ಲೇ ಸುಖ; ಅದು ನಿನಗೆ ಹೇಗೆ ಗೊತ್ತಾಗಬೇಕು. ಎಂದು

ಆಗಾಗ್ಗೆ ಮರ್ಮಭೇದಕವಾದ ಮಾತುಗಳನ್ನು ಕೃಷ್ಣರಾಯರು ಹೆಂಡತಿಗೆ ಆಡುತ್ತಿದ್ದರು.

ಯಾವಾಗಲೂ ಶಾಂತಮೂರ್ತಿಗಳಾಗಿದ್ದ ಕೃಷ್ಣರಾಯರು ಈಗ ಸ್ವಲ್ಪ ಕಿಟಿಕಿಟಿ ಸ್ವಭಾವದವರಾಗಿದ್ದರು. ಕಮಿಟಿಯ ಕೆಲಸದಿಂದ ಬೇಜಾರಾಗಿ ಹೀಗೆ ಮಾಡುತ್ತಿರಬಹುದೆಂದು ರಾಧಾಬಾಯಿಯು ತಿಳಿದು ಹೀಗೇಕೆ ಮಾಡುತ್ತೀರೆಂದು ಎರಡು ಮೂರು ಸಾರೆ ಕೇಳಿ ನೋಡಿದಳು. ಅವರ ಹೇಳಿಕೆಯಿಂದ ಏನೂ ಪರಿಣಾಮವಾಗದ್ದರಿಂದ ಆ ನಂತರ ಹೇಳುವದನ್ನೇ ಬಿಟ್ಟುಬಿಟ್ಟರು.

ನಿರ್ಮಲೆಯನ್ನು ಇಂಗ್ಲೀಷ ಶಾಲೆಗೆ ಸೇರಿಸುವ ವಿಚಾರವನ್ನು ಖಂಡಿತ ಬಿಡಬೇಕಾಗಿ ರಾಧಾಬಾಯಿಯವರು ಆಗ್ರಹತೊಟ್ಟರು.

**ಕೃಷ್ಣರಾಯರು** :— ಶಿಕ್ಷಣದ ಮಹತ್ವ ನಿನಗೆ ಹೇಗೆ ತಿಳಿದೀತು ? ಸಮಾಜದ ಉನ್ನತಿಯು ಸ್ತ್ರೀಯರ ಮಾನಸಿಕ ಪ್ರವೃತ್ತಿಯಲ್ಲಿರುತ್ತದೆ. ಯಾವ ಕೈಯಲ್ಲಿ ಬಾಲಕರ ತೊಟ್ಟಿಲು ತೂಗಾಡುವದೋ ಅದೇ ಕೈ ಸರ್ವ ಜಗತ್ತಿನಮೇಲೂ ತನ್ನ ಅಧಿಕಾರವನ್ನು ನಡೆಯಿಸುತ್ತದೆ. ವಗೈರೆ ಮಹತ್ವದ ಸಿದ್ಧಾಂತಗಳನ್ನು ಹೆಂಡತಿಗೆ ತಿಳಿಸಿ ಹೇಳಿದರೂ ಅವೆಲ್ಲ ವ್ಯರ್ಥವಾಗಿಹೋಯಿತು. ಇಂದಲ್ಲ ನಾಳೆ ತಿಳುವಳಿಕೆಗೆ ಬಂದೀತೆಂದು ನಾಲ್ಕು ತಿಂಗಳುಗಳವರೆಗೆ ದಾರೀನೋಡಿದರು. ಆದರೆ ಸ್ತ್ರೀ ಶಿಕ್ಷಣದ ವಿಚಾರದಲ್ಲಿ ತಮ್ಮ ಅಭಿಪ್ರಾಯವನ್ನು ರಾಧಾಭಾಯಿಯವರು ಬದಲಾಯಿಸಲಿಲ್ಲ. ಕೃಷ್ಣರಾಯರಿಗೆ ಹುಡುಗಿಯ ಶಿಕ್ಷಣ ನಿಂತದ್ದಕ್ಕಾಗಿ ತುಂಬಾ ವ್ಯಥೆಯಾಗುತ್ತಿತ್ತು. ಕಮಿಟಿಯ ಸ್ತ್ರೀ ಸಭಾಸದರಿಂದ ಆಗಾಗ ಅಪಹಾಸ್ಯದ ಮಾತುಗಳನ್ನು ಕೂಡಾ ಕೇಳಬೇಕಾಗುತ್ತಿತ್ತು. ಮತ್ತು ಇವರ ಮನಸ್ಸಿನ ಚಂಚಲತೆಗೋಸ್ಕರ ಕಮಿಟಿಯಲ್ಲಿ ತಮಾಷೆ ಮಾಡುತ್ತಿದ್ದರು. ಕೃಷ್ಣರಾಯರು ಕಾರ್ಯನಿರ್ವಾಹಕ ಸಭೆಯ ಮೆಂಬರರೂ ಆಗಿದ್ದರು. ಸ್ವಂತ ಅಭಿಪ್ರಾಯ ಹೇಳುವ ಸಮಯ ಬಂದಾಗ ಅವರಿಗೆ ಬಹಳ ಲಾಂಛನವಾಗುತ್ತಿತ್ತು. ಇತ್ತ ಹೆಂಡತಿಯ ಮಾತು ಮೀರುವುದು ಕಷ್ಟ; ಕಮಿಟಿಯ ರೂಲಿನಂತೆ ನಡೆಯದಿರುವುದು ಕಷ್ಟ. ಸದ್ಗುಣವತಿಯಾದ ಸ್ತ್ರೀಯರ ಕಟಾಕ್ಷವು ಪತಿಗಳ ಮೇಲೆ ಬೀಳುವುದು ಸಹಜವಲ್ಲವೇ !

ಕೃಷ್ಣರಾಯರು ತುಂಬಾ ಪೇಚಿನಲ್ಲಿ ಸಿಕ್ಕು ಒದ್ದಾಡುತ್ತಿದ್ದರು. ಅವರ ಅವಸ್ಥೆಯು ಮೃದಂಗದಂತೆಯಾಗಿತ್ತು. ಈ ಇಕ್ಕಟ್ಟಿನ ಪ್ರಸಂಗದಿಂದ ಬಿಡುಗಡೆ ಹೊಂದಲು ಡಾಕ್ಟರ ವಿಶ್ವಾಸರಾಯರ ಆಲೋಚನೆ ಕೇಳಿದರು. ಅವರು ಕೇವಲ ಜಾಣತನದಿಂದ ಆ ಪ್ರಶ್ನೆಯನ್ನು ನಿವಾರಿಸಿದರು. ಹ್ಯಾಗಂದರೆ ನಿರ್ಮಲೆಯನ್ನು ತಂದು ನಮ್ಮ ಮನೆಯಲ್ಲಿ ಬಿಟ್ಟುಬಿಡಿ; ಅವಳ ಶಿಕ್ಷಣದ ಜವಾಬುದಾರಿಯನ್ನು ನಾನು ನೋಡಿಕೊಳ್ಳುತ್ತೇನೆ. ಎಂದು ಡಾಕ್ಟರರು ಸೂಚಿಸಿದರು. ಅದಕ್ಕೆ ಕೃಷ್ಣರಾಯರ ಅಕ್ಕನೂ ಸಮ್ಮತಿಸಿದಳು. ತನ್ನ ನಿರ್ಮಲೆಯ ಶಿಕ್ಷಣ ವಿಚಾರಕ್ಕೆ ಅತ್ತಿಗೆಯ ಮಾತನ್ನು ಮಾತ್ರ ಕೇಳಬೇಡಾ; ಅವಳು ಸಂಸಾರದಲ್ಲಿ ಚತುರಳು; ಆದರೆ ಆಕೆಗೆ ವಿದ್ಯೆಬಾರದು. ಈ ನಾಗರೀಕ ವಿದ್ಯೆಯನ್ನು ನೋಡಿ ಆಕೆಗೆ ಏನೋ ವಿಪರೀತ ಗ್ರಹಿಕೆಯಾಗಿದೆ. ನನ್ನ ವಿಚಾರವನ್ನೇ ನೋಡಿ. ಮೊದಮೊದಲು ನನ್ನ ಅತ್ತೆಯವರೇ ನನಗೆ ಈ ವಿಚಾರವಾಗಿ ಯಾವ ಪ್ರಕಾರ ತೊಂದರೆ ಕೊಟ್ಟರು! ನಾನು ಆಗ ಸ್ಕೂಲನ್ನು ಬಿಟ್ಟಿದ್ದರೆ ಎರಡು ಅಕ್ಷರಗಳು ಕೂಡಾ ಬರುತ್ತಿರಲಿಲ್ಲ. ನೀವು ಮಾತ್ರ ಹಾಗೆ ಮಾಡಬೇಡಿ, ಭಂಗಾರದಂಥ ಬಾಲಕಿ; ಆಕೆಗೆ ವಿದ್ಯೆ ಕಲಿಸಲೇ ಬೇಕು.

ಕೃಷ್ಣರಾಯರು ಮಾರನೇ ದಿವಸವೇ ನಿರ್ಮಲೆಯನ್ನು ಡಾಕ್ಟರರ ಸ್ವಾಧೀನ ಮಾಡಿದರು. ಡಾಕ್ಟರರು ಕಮಿಟಿಯ ಮುಖಾಂತರ ನಡೆಯುವ ಬಾಲಿಕಾ ಆಂಗ್ಲವಿದ್ಯಾಲಯದಲ್ಲಿ ನಿರ್ಮಲೆಯನ್ನು ದಾಖಲ ಮಾಡಿದರು. ಅಲ್ಲದೆ ಮನೆಯಲ್ಲಿ ಪಾಠ ಹೇಳಲು ಒಬ್ಬ ಆಂಗ್ಲವಿದ್ಯಾಪ್ರವೀಣೆಯಾದ ಶಿಕ್ಷಕಿಯನ್ನು ಗೊತ್ತುಮಾಡಿದರು.

ರಾಧಾಬಾಯಿಗೆ ಇದೆಲ್ಲಾ ಸರಿದೋರಲಿಲ್ಲ. ಯಾಕಂದರೆ ಡಾಕ್ಟರರ ಮನೆಯ ರೀತಿ ನೀತಿಗಳು ಆಕೆಗೆ ಯಾವಾಗಲೂ ಸರಿಬರುತ್ತಿರಲಿಲ್ಲ. ಅದರಿಂದ ನಿರ್ಮಲೆಯ ರೀತಿಗಳು ಇನ್ನು ಮೇಲೆ ಸರಿಯಾಗಿರುವದಾಗಿಲ್ಲವೆಂದು ವಿನಯಪೂರ್ವಕವಾಗಿ ಪತಿಗೆ ಹೇಳಿಕೊಂಡಳು. ಕಮಿಟಿಗೆ ಸೇರಿದ ಲಾಗಾಯ್ತು ಹೊಸ ಹೊಸ ವಿಚಾರಗಳು ಕೃಷ್ಣರಾಯರ ಮನಸ್ಸಿನಲ್ಲಿ ಹೊಕ್ಕದ್ದರಿಂದ ರಾಧಾಬಾಯಿಯ ಮಾತು. ಅವರಿಗೆ ಸಂಬರಲಿಲ್ಲ. ಗಂಡಸರ

ಅಭಿಪ್ರಾಯವನ್ನು ತಿಳಿದು ರಾಧಾಬಾಯಿಯು ಹೆಚ್ಚುಮಾತುಗಳನ್ನು ಈ ವಿಷಯವಾಗಿ ಆಡುತ್ತಿರಲಿಲ್ಲ.

ಉಪಾಧ್ಯಾಯಿನಿಯ ಸಹಾಯದಿಂದ ಒಂದು ವರ್ಷದೊಳಗೆ ನಿರ್ಮಲೆಯು ಮೂರನೇತರಗತಿಯನ್ನು ಮುಗಿಸಿದಳು. ಮೂರನೇ ತರಗತಿಯ ವಾರ್ಷಿಕ ಪರೀಕ್ಷೆಯಲ್ಲಿ ಒಂದನೇ ನಂಬರು ತೇರ್ಗಡೆ ಹೊಂದಿದಳು. ಸ್ಕೂಲಿನ ವರ್ಷದ ಹಬ್ಬದ ಸಭೆಯಲ್ಲಿ ನಿರ್ಮಲೆಗೆ ಕಣ್ಣು ಹೊರಳಿಸುವ ಎರಡು ರಬ್ಬರಿನ ಗೊಂಬೆಗಳೂ, ಚೀಟಿನ ಲಂಗವೂ ( ಪರಕರ ) ಕೃತಕ ರೇಶಿಮೆಯ ಜಾಕೀಟು ಇನಾಮಾಗಿ ದೊರೆತವು.

ಮಗಳಿಗೆ ಗೌರವಾರ್ಥವಾಗಿ ಇನಾಂ ದೊರೆತದ್ದನ್ನು ನೋಡಿ ಕೃಷ್ಣರಾಯರಿಗೆ ಆನಂದವಾಯಿತು. ಡಾಕ್ಟರರಿಗೂ ತಾವು ಕೈಕೊಂಡ ಕೆಲಸ ಸರಿಯಾಗಿ ನೆರವೇರಿತೆಂದು ತುಂಬಾ ಸಂತೋಷವಾಯಿತು.

ಈ ಬಹುಮಾನದಿಂದ ನಿರ್ಮಲೆಯೂ ಉತ್ಸಾಹದಿಂದ ತನ್ನ ಪಾಠಗಳನ್ನು ಕಲಿಯತೊಡಗಿದಳು. ಮುಂದಿನ ಎರಡು ವರ್ಷದಲ್ಲಿ ನಾಲ್ಕು ಮತ್ತು ಐದನೇ ತರಗತಿಗಳು ಮುಗಿದವು. ಐದನೇ ತರಗತಿಯು ಮುಗಿದೊಡನೆಯೇ ಖಾಸಗಿ ಉಪಾಧ್ಯಾಯಿನಿಯನ್ನು ಡಾಕ್ಟರರು ತಪ್ಪಿಸಿ ಬಿಟ್ಟರು. ಯಾಕೆಂದರೆ ನಿರ್ಮಲೆಗೆ ನಾನೇ ಹೇಳಿಕೊಡುತ್ತೇನೆಂದು ವಿನಾಯಕನು ಹೇಳಿದ್ದನು. ಮೊದಮೊದಲು ಅವನಿಗೆ ವಿರಾಮವಿರಲಿಲ್ಲ. ಅವನ ಅಭ್ಯಾಸವೇ ಅವನಿಗೆ ಜಾಸ್ತಿಯಾಗಿತ್ತು. ಈಚೆಗೆ ಅವನು ಹೈಸ್ಕೂಲಿನಿಂದ ವಿಶ್ವವಿದ್ಯಾಲಯಕ್ಕೆ ಹೋಗಿದ್ದನು. ಆದರೂ ವಿರಾಮವು ಅಷ್ಟೇನು ಇರಲಿಲ್ಲ. ಆದರೆ ನಿರ್ಮಲೆಯೊಡನೆ ಮಾತಾಡುತ್ತ ಇರಬೇಕು. ತಿರುಗಾಡಲಿಕ್ಕೆ ಆಕೆಯನ್ನು ಕರೆದೊಯ್ಯಬೇಕು. ಒಟ್ಟಿನಲ್ಲಿ ಆನುಕೂಲವಾದಾಗ ಅವಳ ಸಂಗಡ ಸಂಭಾಷಣೆ ಮಾಡಬೇಕೆಂದು ಈಚೆಗೆ ಅವನಿಗೆ ಮನಸ್ಸು ಉಂಟಾಗಿತ್ತು. ಅದಕ್ಕೋಸ್ಕರವೇ ಪಾಠಹೇಳಲು ಒಪ್ಪಿದುದು. .... .... ....

ವಿನಾಯಕನು ವಿಶ್ವಾಸರಾಯರ ಮಗನು. ಅವರಿಗೆ ಬೇರೆ ಮಕ್ಕಳಿರಲಿಲ್ಲ.

ನಿರ್ಮಲೆಗೆ ಈಗ ಹದಿಮೂರು ವರ್ಷತುಂಬಿ ಹದಿನಾಲ್ಕಕ್ಕೆ ಪ್ರಾರಂಭವಾಗಿತ್ತು. ಅವಳ ಮುಖದಲ್ಲಿ ಬಾಲಚರ್ಯೆಗಳು ಲೋಪವಾಗಿ ತಾರುಣ್ಯದ

ಚಿನ್ಹಗಳು ತೋರಹತ್ತಿದವು. ವಿನಾಯಕನ ವಯಸ್ಸಾದರೂ ತಾರುಣ್ಯದ ಚಿನ್ಹಗಳನ್ನು ಗ್ರಹಿಸಲು ಯೋಗ್ಯವಾಗಿತ್ತು. (ಅಂದರೆ ಇಪ್ಪತ್ತೊಂದು ವರ್ಷವಾಗಿತ್ತು) ನಿರ್ಮಲೆಗೆ ಮಾತ್ರ ವಿನಾಯಕನ ಶೋಭೆಯು ಮೆಚ್ಚಿರಲಿಲ್ಲ. ಯಾಕಂದರೆ ಅವನ ಮುಖಲಕ್ಷಣವನ್ನು ದೇವರು ಕೇವಲ ವಿರೂಪವಾಗಿ ನಿರ್ಮಿಸಿದ್ದನು. ; ಆದರೂ ಅವನು (ಕ್ರಾಪ್) ಕೂದಲು ಬೆಳೆಸುವುದು, ತರಹೇವಾದ ಉಡುಪು ಧರಿಸುವುದು, ವಗೈರೆ ಕೃತ್ರಿಮ ಉಪಾಯಗಳಿಂದ ತನ್ನ ಶೃಂಗಾರವನ್ನು ಹೆಚ್ಚಿಸಲು ಪ್ರಯತ್ನಿಸುತ್ತಿದ್ದನು. ಇದರಿಂದ ಅವನ ಸುಂದರತ್ವ ಹೆಚ್ಚಾಗಿ ತೋರುತ್ತಿರಲಿಲ್ಲ. ಮತ್ತು ಶಾಲೆಯ ತರಗತಿಗಳಲ್ಲಿ ನಿರ್ಮಲೆಯು ಮೊದಲನೇ ನಂಬರು ಇದ್ದರೆ ಇವನು ಕೊನೇ ನಂಬರಿನಲ್ಲಿರುವನು, ಇದರಿಂದ ಇವನ ಬುದ್ಧಿಯು ಅಷ್ಟು ಚುರುಕಾಗಿರಲಿಲ್ಲವೆಂದು ಹೇಳಲು ತೊಂದರೆ ಏನು? ಈ ಕಾರಣಗಳಿಂದಲೇ ನಿರ್ಮಲೆಗೆ ವಿನಾಯಕರಾಯನ ಮೇಲೆ ಪ್ರೀತಿ ಕೂತಿರಲಿಲ್ಲ.

ನಿರ್ಮಲೆಯು ಒಳ್ಳೇ ಬುದ್ಧಿವಂತೆಯಾಗಿದ್ದಳು. ಕಾರಣ ಅವಳಿಗೆ ಅಭ್ಯಾಸದಲ್ಲಿ ಬೇರೆಯವರ ಸಹಾಯವೇ ಬೇಕಾಗಿರಲಿಲ್ಲ. ಅದರಲ್ಲೂ ವಿನಾಯಕರಾಯನು ಏನು ಹೇಳಿಕೊಟ್ಟಾನು! ಎಂಬ ಸಂಗತಿಯು ಅವಳಿಗೆ ತಿಳಿದಿತ್ತು. ಅವನ ಅಭ್ಯಾಸಕ್ರಮವೂ ಅವಳಿಗೆ ಸರಿಬಂದಿರಲಿಲ್ಲ. ಡಾಕ್ಟರರ ಭೀತಿಗೂ ತಂದೆಯವರ ಆಗ್ರಹಕ್ಕೂ ಈ ವಿಷಯವನ್ನು ಅವಳು ಕೃತಿಯಲ್ಲಿ ತೋರಗೊಡುತ್ತಿರಲಿಲ್ಲ. ಪ್ರತಿದಿವಸವೂ ನನ್ನ ಪಾಠಮುಗಿದಿದೆ. ಬರೆವಣಿಗೆ ಈ ದಿನ ಜಾಸ್ತಿ; ಎಂಬ ನೆಪಗಳಿಂದಲೇ ಅವನನ್ನು ಮೋಸಗೊಳಿಸಿ ಪಾಠ ಹೇಳಿಸಿಕೊಳ್ಳುವುದನ್ನು ತಪ್ಪಿಸುತ್ತಿದ್ದಳು. ಇದೇ ರೀತಿ ಎರಡು ವರ್ಷ ಕಾ[illegible] ಕಳೆದಳು. ಅವಳು ಪ್ರವೇಶ ಪರೀಕ್ಷೆಯಲ್ಲಿ ಒಂದನೇವರ್ಗವಾಗಿ ತೇಗ[illegible] ಹೊಂದಿದಳು. ಗಣಿತದಲ್ಲಿ ಹೆಚ್ಚು ಅಂಕಗಳನ್ನು ಪಡೆದಿದ್ದರಿಂದ ಆಕೆಗೆ ಎರಡು ಶಿಷ್ಯವೇತನಗಳು (ಸ್ಕಾಲರಶಿಪ್) ದೊರೆತವು. ವಾಕ್ಯರಚನೆಗೋಸ್ಕರ ಒಂದು ಭಂಗಾರದ ಪದಕವೂ ದೊರೆಯಿತು. ಈ ಪದಕದ ಬಹುಮಾನವು ಇದುವರೆಗೂ ಯಾವಹೆಂಗಸರಿಗೂ ದೊರೆತಿರಲಿಲ್ಲ. ಕಾರಣ ಎಲ್ಲ ಕಡೆಗೂ ಆಕೆಯ ಹೆಸರು ಹರಡಿತ್ತು. ಕವಿಾಟಿಯ ಮುಖಪತ್ರದಲ್ಲಿ ಇವಳ ಗುಣ-ಕಥನ ಪರವಾದ ಲೇಖವೂ ಮುಖಚಿತ್ರವೂ ಪ್ರಸಿದ್ಧವಾಗಿ ಪ್ರಕಟಿ

ವಾಗಿತ್ತು. ಸಮಾಜಸೇವಾ ಕಮಿಟಿಯ ಅನೇಕ ಶಾಖಾ ಕಮಿಟಿಗಳಿಂದ ಧನ್ಯವಾದ ತಾರುಗಳು ಕೃಷ್ಣರಾಯರಿಗೂ ಡಾಕ್ಟರರಿಗೂ ಬಂದಿದ್ದವು. ನಿರ್ಮಲೆಯ ಸಂತೋಷಕ್ಕಂತೂ ಪಾರವೇ ಇರಲಿಲ್ಲ. .. .. ..

ಪರೀಕ್ಷೆಯ ಪರಿಣಾಮವು ತಿಳಿದೊಡನೆ ಮುಂದೆ ಯಾವ ಭಾಗತೆಗೆದುಕೊಳ್ಳಬೇಕು. ವಗೈರೆ ವಿಚಾರ ಮಾಡುವುದಕ್ಕೂ ನಿರ್ಮಲೆಯು ರಾಧಾ ಸದನಕ್ಕೆ ಹೋದಳು. ಇಷ್ಟು ಸಮೀಪದಲ್ಲಿದ್ದರೂ ಈಗ ಐದು ವರ್ಷಗಳಿಂದ ಅವಳು ಮನೆಗೆ ಹೋಗಿರಲಿಲ್ಲ. ತಾನು ಹೇಳಿಕಳಿಸಿದರೂ ಬರಲಿಕ್ಕಿಲ್ಲವೆಂಬ ನಂಬಿಕೆಯಿಂದ ಯಾವ ಹಬ್ಬಕ್ಕೂ ಅವಳನ್ನು ಅವಳ ತಾಯಿಯು ಕರೆಕಳಿಸಿರಲಿಲ್ಲ. ಐದು ವರ್ಷಗಳಲ್ಲಿ ಕೃಷ್ಣರಾಯರ ಸ್ವಭಾವದಲ್ಲಿ ಬಹಳೇ ಹೆಚ್ಚು ಕಡಿಮೆಯಾಗಿತ್ತು. ಹೆಚ್ಚಾಗಿ ಅವರು ಮನೆಯಲ್ಲಿಯೇ ಇರುತ್ತಿರಲಿಲ್ಲ. ಇದ್ದರೂ ಮೊದಲಿನಂತೆ ಹೆಂಡತಿಯೊಡನೆ ಪ್ರೇಮವಾಗಿರಲಿಲ್ಲ. ಕಾರಣವು ವಾಚಕರಿಗೆ ಗೊತ್ತಿರಬಹುದು.

---

## ೬ ನೆಯ ಪರಿಚ್ಛೇದ.

### ರಾಧಾಬಾಯಿಯವರ ಅಂತ್ಯಕಾಲ.

ನಿರ್ಮಲೆಯು ಇಂಥ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದಳು. ಅವಳು ಒಂದನೇ ವರ್ಗದಲ್ಲಿ ಬಂದಳು. ಅವಳಿಗೆ ಇಂಥ ಬಹುಮಾನ ಸಿಕ್ಕಿತು. ಅವಳ ಹೆಸರು ಇಂಥ ಮಾಸಿಕ ಪುಸ್ತಕದಲ್ಲಿ ಪ್ರಸಿದ್ಧವಾಯಿತು. ವಗೈರ ಸಂಗತಿಗಳು ಯಾವಾಗ ಕೇಳುತ್ತಾರೋ ಆಗೆಲ್ಲ ರಾಧಾಬಾಯಿಗೆ ಮೈಯಲ್ಲಿ ಒಂದು ಮುಷ್ಟಿ ಮಾಂಸ ಬೆಳೆದಂತೆ ಉಬ್ಬುವಳು. ಆದರೆ ರಜೆಯ ಕಾಲದಲ್ಲಿ ನಿರ್ಮಲೆಯು ಮನೆಗೆ ಬಂದಾಗ ಆಕೆಯ ಒಂದೆರಡು ದಿವಸದ ನಡೆ-ನುಡಿ ನೋಡಿದರೆ ಅವಳ ಪರಿಸ್ಥಿತಿಯೇ ಬದಲಿಸಿದಂತೆ ತೋರಿ ಮನಸ್ಸಿಗೆ ಚಿಂತೆಯಾಗುತ್ತಿತ್ತು. ಈ ಭೀತಿಯನ್ನು ಕಳೆದುಕೊಳ್ಳಲು ಈಗ ಎರಡು ವರ್ಷಗಳಿಂದಲೂ ಹುಡುಗಿಯ ಲಗ್ನ ಮಾಡಬೇಕೆಂದು ಕೃಷ್ಣರಾಯರಿಗೆ

ಗಂಟುಬಿದ್ದಳು. ಲಗ್ನವಾಗಿ ಒಂದಾವರ್ತಿ ಮಾವನಮನೆಗೆ ಹೋಗಿ ಚೆನ್ನಾಗಿ ಸಂಸಾರ ಮಾಡುತ್ತಾಳೆಂಬ ಹೆಸರು ಬಂದರೆ ರಾಧಾಬಾಯಿಗೆ ಈ ವ್ಯಸನವೆಲ್ಲ ಹೋಗುತ್ತಿತ್ತು. ಕಮಿಟಿಗೆ ಸೇರಿದನಂತರ ಕೃಷ್ಣರಾಯರ ಮನಸ್ಸು ಪರಿವರ್ತನೆಯಾದದ್ದು ಆ ಬಡಪಾಯಿ ಹೆಂಗಸಿಗೇನು ಗೊತ್ತು.

ಆದರೆ ಆಂಗ್ಲ ಭಾಷೆ ಕಲಿಸುವ ವಿಚಾರದಲ್ಲಿ ತನ್ನ ಮಾತು ಕೇಳದಿದ್ದರೂ ಲಗ್ನದ ವಿಚಾರವನ್ನು ಖಂಡಿತ ಕೇಳುತ್ತಾರೆಂದು ಆಕೆಗೆ ನಂಬಿಕೆ ಇತ್ತು. ಲಗ್ನದ ಸುದ್ದಿ ಬಂದೊಡನೆ ಕೃಷ್ಣರಾಯರು ನೋಡೋಣ, ಯಾರಿಗಾದರೂ ಕೊಡಲಿಕ್ಕೆ ಬರುತ್ತದೋ? ಒಳ್ಳೇ ಅನುರೂಪನಾದ ವರಸಿಗಲಿ. ಆ ಮೇಲೆ ಆಲೋಚನೆ ಎಂದು ಹೇಳುತ್ತಿದ್ದರು ಇದು ನಿಜವೆಂದು ರಾಧಾಬಾಯಿಯು ಸುಮ್ಮಗಿರುತ್ತಿದ್ದಳು. ಆದರೆ ನಿರ್ಮಲೆಗೆ ಹದಿನೈದು ವರ್ಷ ತುಂಬಿ ಆಕೆಯ ಅವಯವಗಳಲ್ಲಿ ಬದಲಾವಣೆಯಾಗಿ ಯೌವ್ವನ ಪೆಸಿಯು ಕಾಣಲಾರಂಭಿಸಿತೋ ಆಗ ಮಾತ್ರ ನೋಡೋಣವೆಂಬ ಮಾತಿಗೆ ಆಕೆಯು ಸಮ್ಮತಿಸದಾದಳು. ಈ ವರ್ಷ ಮಾರ್ಗಶೀರ್ಷದಲ್ಲಿ ನಿರ್ಮಲೆಯ ಲಗ್ನವಾಗಲೇಬೇಕೆಂದು ರಾಧಾಬಾಯಿಯು ಹಟಹಿಡಿದಳು. ಈಗ ಮಾತ್ರ ಕೃಷ್ಣರಾಯರಿಗೆ ಸ್ವಲ್ಪ ಚಿಂತೆಯಾಯಿತು. ಆದರೂ ಧೈರ್ಯದಿಂದ ಆಗಲಿ, ನಿರ್ಮಲೆಯು ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆಯಾದೊಡನೆ ಮಾಡುವಾ ಎಂದು ಹೇಳಿ ಆಕೆಯ ಸಮಾಧಾನ ಮಾಡಿದರು.

ರಾಧಾಬಾಯಿಯು ತುಂಬಾ ಚತುರಳಿದ್ದಳು. ಕೃಷ್ಣರಾಯರ ಮಾತಿನ ಅರ್ಥವು ಅವಳಿಗೆ ಗೊತ್ತಾಯಿತು. ಕಮಿಟಿಯ ಸಭಾಸದರಂತೆ ನಿರ್ಮಲೆಯನ್ನು ಬೆಳೆಸುವರು. ಆ ಮೇಲೆ ಆಕೆಯ ಲಗ್ನದ ವಿಚಾರದಲ್ಲಿ ತೊಂದರೆ ಬರಬಹುದು. ಎಂಬ ಚಿಂತೆಯು ಅವಳಿಗೆ ಬಾಧಿಸಹತ್ತಿತು. ಮತ್ತು ಇದೇ ಚಿಂತೆಯಿಂದ ಅನ್ನ ನೀರು ಸಹ ಅವರಿಗೆ ರುಚಿತೋರುತ್ತಿರಲಿಲ್ಲ. ಅವರು ಬರಬರುತ್ತಾ ಸೊರಗಿ ಬಡವಾಗಹತ್ತಿದರು.

ನಿರ್ಮಲೆಯು ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಯಾವ ದಿನ ಮನೆಗೆ ಬಂದಳೋ ಆವತ್ತಿನಿಂದ ಅವಳ ಲಗ್ನದ ಮಾತನ್ನು ರಾಧಾಬಾಯಿಯು ಉತ್ಸಾಹದಿಂದ ಕೃಷ್ಣರಾಯರಿಗೆ ತಿಳಿಸುತ್ತಿದ್ದಳು. ಒಂದೆರಡುಸಾರೆ ಈ

ಮಾತು ಕೇಳಿದರೂ ಕೇಳದವರಂತೆ ಇದ್ದು ಕೊನೆಗೆ ಕೃಷ್ಣರಾಯರು ಕೋಪ ದಿಂದ ಹಗಲೆಲ್ಲ ನೀನು ಈ ಕಾವ್ಯವ್ಯಸನವನ್ನು ನನಗೆ ಹಚ್ಚುವುದಾದರೆ ನಾನು ಸುಮ್ಮನೆ ಮದರಾಸಿಗೆ ಹೋಗುತ್ತೇನೆ. ಎಂದು ಹೆದರಿಕೆ ಹಾಕಿದರು. ಮತ್ತು ಕೂಡಲೆ ಮದರಾಸಿಗೆ ಹೊರಟೇ ಹೋದರು. ಪುನಃ ಎಂಟು ದಿವಸ ಬರಲೇ ಇಲ್ಲ.

ಇದರಿಂದ ರಾಧಾಬಾಯಿಯು ಕತ್ತರಿಯಲ್ಲಿ ಸಿಕ್ಕಂತಾದರು. ಮನುಷ್ಯ ನಿಗೆ ಕಷ್ಟಗಳು ಬರಲು ಪ್ರಾರಂಭಿಸಿದರೆ ಒಂದರಮೇಲೊಂದು ಬರುತ್ತವೆ. ಗಂಡನರು ಸಿಟ್ಟಿನಿಂದ ಹೊರಟುಹೋದರು ಎಂಬ ಚಿಂತೆಯು ಪ್ರಾಪ್ತ ವಾಯಿತು. ಹೇಮಂತಋತುವಿನ ಬೆಳಗಿನ ಸೌಮ್ಯವೇಳೆಯಲ್ಲಿ ನಿರ್ಮಲೆಗೆ ರಜೋದರ್ಶನವಾಯಿತು.

ನಿರ್ಮಲೆಗೆ ಲಗ್ನವಾಗಿದ್ದರೆ ರಾಧಾಬಾಯಿಯು ಈ ಮಂಗಲ ಸಮ ಯವನ್ನು ಕೇವಲ ಉತ್ಸಾಹದಿಂದಲೂ ಸಡಗರದಿಂದಲೂ ಮಾಡುತ್ತಿದ್ದರು. ಏನುಮಾಡಬೇಕು ಯಾವುದನ್ನು ಬಿಡಬೇಕು ಎಂಬ ಪರಿವೆ ಇಲ್ಲದೆ ಆನಂದ ಸಾಗರದಲ್ಲಿ ಮುಳುಗುತ್ತಿದ್ದರು ಅದು ಅವರ ದೈವದಲ್ಲಿ ಬರದಿರಲಿಲ್ಲ ಮತ್ತು ಜನರಿಗೆ ಈ ಸಂಗತಿ ತಿಳಿದರೆ ಸಮಾಜದಲ್ಲಿ ನಮಗೆ ಗೌರವಸಿಗಲಿಕ್ಕಿಲ್ಲ; ಅಷ್ಟೇ ಅಲ್ಲ ನಮ್ಮ ಮನೆಗೆ ಬಂದು ನೀರನ್ನು ಸಹ ಕುಡಿಯಲಿಕ್ಕಿಲ್ಲ. ನಮ್ಮನ್ನು ಬಹಿಷ್ಕರಿಸಿ ಬಿಡುತ್ತಾರೆ. ಹೊರಗೆ ಮುಖವನ್ನು ಹೇಗೆ ತೋರಿಸ ಬೇಕು. ವಗ್ಗೈರೆ ಚಿಂತೆಯಿಂದ ಅವರು ಹೃದ್ರೋಗವನ್ನೇ ಹಚ್ಚಿಕೊಂಡರು.

ಮನೆಯಿಂದ ಬೇಜಾರಾಗಿ ಮದರಾಸಿಗೆ ಹೋದ ಕೃಷ್ಣರಾಯರು ಈ ಕೆಲಸ ಆದ ಎರಡು ದಿವಸದಮೇಲೆ ಹಿಂದಿರುಗಿ ಬಂದರು. ಈಗಲಾದರೂ ನಿಮಗೆ ಸಂತೋಷವಾಯಿತೇ? ಎಂದು, ಲಗ್ನ ಮಾಡುವ ವಿಚಾರವನ್ನು ಪುನಃ ನೆನಪುಮಾಡಿ ರಾಧಾಬಾಯಿಯವರು ಹೇಳಿದರು. ಕೃಷ್ಣರಾಯರು ಏನೂ ಮಾತಾಡದೆ ಸ್ವಲ್ಪ ಹೊತ್ತು ಕೂತುಕೊಂಡು ನಮ್ಮ ಕಮಿಟಿಯಲ್ಲಿ ಪಂಡಿತರಿದ್ದಾರೆ, ಪ್ರಖ್ಯಾತ ಗುರುಗಳಿದ್ದಾರೆ. ವಿದುಷಿಯರಿದ್ದಾರೆ ಅವ ರೆಲ್ಲರೂ ಎಲ್ಲಸಂಗತಿಗಳನ್ನೂ ವ್ಯವಹಾರ ದೃಷ್ಟಿಯಿಂದಲೂ ಶಾಸ್ತ್ರರೀತಿ ಯಿಂದಲೂ ಆಲೋಚಿಸಿ ಬಾಲಿಕೆಯರ ವಯಸ್ಸು ಹದಿನೆಂಟು ಆಗುವವರೆಗೆ

ಲಗ್ನ ಮಾಡಬಾರದಾಗಿ ಕಮಿಟಿಯಲ್ಲಿ ತೀರ್ಮಾನವಾಗಿದೆ. ಅದರಂತೆ ನಾನು ನಡೆಯಲು ಸಹ ನಿರ್ಧರಿಸಿರುವೆನು. ಇದರಿಂದ ನಿರ್ಮಲೆಗೂ ಸುಖವುಂಟು. ಹೀಗಿದ್ದೂ ನೀನು ಹಳೇ ಮತ್ತು ಕೆಲಸಕ್ಕೆ ಬಾರದ ಪದ್ಧತಿಗಳನ್ನು ಮನಸ್ಸಿಗೆ ಹಚ್ಚಿಕೊಂಡು ಕಷ್ಟಪಡಬೇಡ. ಜನರು ಅಪಹಾಸ್ಯ ಮಾಡುತ್ತಾರೆಂದು ನೀನು ಅಂಜಬೇಡ ನಮಗೆ ಕಮಿಟಿಯ ದೊಡ್ಡ ಬೆಂಬಲವಿದೆ. ನಿನಗೆ ಅದರ ಅನುಭವವಿಲ್ಲದಿದ್ದರೂ ನನಗೆ ಖಾತ್ರಿ ಇದೆ. ನಿರ್ಮಲೆಗೆ ಒಳ್ಳೇದಾಗಬೇಕೆಂದು ನಿನಗೆ ಹೇಗೆ ಇದೆಯೋ ಹಾಗೆಯೇ ನನಗೂ ಇದೆ. ಕಾರಣ ನೀನು ನನಗೂ ಬೇರೆಯವರಿಗೂ ಕಷ್ಟದಲ್ಲಿ ನೂಕಬೇಡ. ಲಗ್ನದ ವಿಚಾರವೇನು? ನಿರ್ಮಲೆಯು ಮನಸ್ಸಿನಲ್ಲಿ ತಂದರೆ ಕೂಡಲೇ ಆಗುವುದು. ವಗೈರೆ ಸಂಗತಿಗಳನ್ನು ತಿಳಿಸಿ ಹೇಳಿದರೂ ಅದು ರಾಧಾಬಾಯಿಗೆ ಸಮ್ಮತವಾಗಲಿಲ್ಲ.

ನಿಮ್ಮ ಕಮಿಟಿ ಗಿಮಿಟಿ ನನಗೆ ತಿಳಿಯುವದಿಲ್ಲ. ಹುಡುಗಿಯ ಲಗ್ನ ಆಗಲೇಬೇಕು. ಲಗ್ನವಾಗದಿದ್ದರೆ ನಾನು ಮನೆಯೊಳಗಿರಲಿಕ್ಕಿಲ್ಲವೆಂದು ಖಂಡಿತ ಹೇಳಿಬಿಟ್ಟಳು.

ಮನೆಯಲ್ಲಿ ನಡೆಯುವ ಮಾತುಗಳನ್ನು ನಿರ್ಮಲೆಯು ಕೇಳುತ್ತಲೂ, ನೋಡುತ್ತಲೂ ಇದ್ದಳು ಹುಡುಗಿಯರ ಲಗ್ನದ ವಿಚಾರದಲ್ಲಿ ಕಮಿಟಿಯಲ್ಲಿ ತೀರ್ಮಾನ ಮಾಡಿದ ಸಂಗತಿ ಆಕೆಗೆ ಗೊತ್ತು. ಅದಕ್ಕೆ ಅವಳ ಸಮ್ಮತಿಯೂ ಇತ್ತು. ಕಾರಣ ಇವಳೂ ರಾಧಾಬಾಯಿಯ ಮಾತಿಗೆ ಒಪ್ಪಲಿಲ್ಲ. ಮತ್ತು ಇಷ್ಟು ಬೇಗನೆ ಲಗ್ನವಾಗುವ ಕಾರಣವಾದರೂ ಏನು? ಒಂದು ವೇಳೆ ತಂದೆಯೂ ಲಗ್ನಮಾಡಲು ಒಪ್ಪಿದರೆ ನಾನು ಅವರ ಮಾತಿಗೆ ಸಮ್ಮತಿ ಕೊಡುತ್ತಿದ್ದಿಲ್ಲವೆಂದು ತನ್ನ ಮನಸ್ಸಿನ ಅಭಿಪ್ರಾಯವನ್ನು ಹೇಳಿ ತೋರಿಸುತ್ತಿದ್ದಳು. ಮತ್ತು ಈಗಲೇ ನನ್ನ ಲಗ್ನಮಾಡಿದರೆ ನನ್ನ ಮುಂದಿನ ವಿದ್ಯಾಭ್ಯಾಸವು ಹೇಗೆ ನಡೆದೀತು? ನೀನೇ ವಿಚಾರಮಾಡೆಂದು ತಾಯಿಗೆ ಹೇಳಿದಳು.

ಕೃಷ್ಣರಾಯರ ಮತ್ತು ರಾಧಾಬಾಯಿ ಇವರಲ್ಲಿ ಮೇಲಿನಂತೆ ಚರ್ಚೆ ನಡೆದು ನಿರಾಶೆಯಿಂದ ರಾಧಾಬಾಯಿಯು ಹಾಸಿಗೆಯನ್ನೇ ಹಿಡಿದು ಬಿಟ್ಟರು.

ಕೃಷ್ಣರಾಯರು ಹೆಂಡತಿಯ ಕಡೆಗೆ ಲಕ್ಷ್ಯಕೊಡದೆ, ಕೂಡಲೆ ಸಿಮರ್ಗಲಿಯನ್ನು ವಿದ್ಯಾಲಯಕ್ಕೆ ಸೇರಿಸಲು ಮದರಾಸಿಗೆ ಹೊರಟು ಹೋಗಿ ಅವಳನ್ನು ಸ್ಕೂಲಿಗೆ ಸೇರಿಸಿದರು. ವಿದ್ಯಾಭ್ಯಾಸದಲ್ಲಿ ಸಿಮರ್ಗಲಿಗೂ ತುಂಬಾ ಉತ್ಸಾಹವಿತ್ತು. ಕಾರಣ ಅವಳೂ ತಾಯಿಯ ಕಡೆ ಲಕ್ಷ್ಯಕೊಡದೆ ವಿದ್ಯೆಯ ಮಹತ್ವಕ್ಕೆ ಲಕ್ಷ್ಯಗೊಟ್ಟು ಮನಸ್ಸನ್ನು ಗಟ್ಟಿಮಾಡಿ ಹೊರಟಳು.

ರಾಧಾಬಾಯಿ ಹಾಸಿಗೆ ಹಿಡಿದವರು ಪುನಃ ಏಳಲೇ ಇಲ್ಲ. ಸಿಮರ್ಗಲಿಯು ಹೊರಟ ದಿವಸ ಅವರಿಗೆ ವಿಪರೀತ ಜ್ವರ ಬಂದಿತ್ತು. ಕೃಷ್ಣರಾಯರು ಬಹಳವಾಗಿ ಔಷಧೋಪಚಾರ ಮಾಡಿದರು. ಎಂಟನೇ ದಿವಸ ಖ್ಯಾತ ಡಾಕ್ಟರರನ್ನು ಕರೆತಂದರು. ಯಾವ ಕೊನೇಗಾಲಕ್ಕೆ ಡಾಕ್ಟರರಾದರೂ ಏನು ಮಾಡಬಲ್ಲರು! ಡಾಕ್ಟರರು ಹೋದ ಎರಡು ತಾಸಿನಲ್ಲೇ ಅವರ ಪ್ರಾಣ ಹೋಗಲು ಪ್ರಾರಂಭಿಸಿತು. ಪ್ರಾಣಹೋಗುವಾಗ ಸಿಮರ್ಗಲಿಯ ಲಗ್ನ! ಸಿಮರ್ಗಲಿಯ ಲಗ್ನವಾಗುವುದೇ! ಎನ್ನುತ್ತಾ ಲಗ್ನದ ಹಂಬಲಿಕೆಯಲ್ಲಿ ಪ್ರಾಣಬಿಟ್ಟರು

---

## ೭ನೆಯ ಪರಿಚ್ಛೇದ.



### ಸನಾತನ ಪತ್ರಿಕೆಯ ವಿಚಾರಸರಣಿಯು.

ರಾಧಾಬಾಯಿಯ ಮರಣದನಂತರ ಯಾವ ಕೆಲಸ ಮಾಡಬೇಕು! ಯಾವುದನ್ನು ಮಾಡಬಾರದು ಎಂಬುದನ್ನು ತಿಳಿಯದೆ ವ್ಯಗ್ರ ಮನಸ್ಸು ಕೃಷ್ಣರಾಯರಿಗೆ ಉಂಟಾಯಿತು. ಹೀಗಾಗುವುದೆಂಬ ಕಲ್ಪನೆಯು ಕೂಡಾ ಅವರಿಗಿರಲಿಲ್ಲ. ತಮ್ಮ ಸ್ಥಿತಿಯು ಹೀಗಾದುದಕ್ಕೆ ತುಂಬಾ ವ್ಯಸನವಾಯಿತು. ಬಾಲಿಕೆಗೆ ಸ್ಕೂಲಿಗೆ ಸೇರಿಸುವಾಗ ಇದ್ದ ಕರ್ತವ್ಯನಿಷ್ಠತೆಯು ಈಗ ಇಲ್ಲವಾಗಿ ಹೋಯಿತು. ಮೇಲಿಂದ ಮೇಲೆ ಅವರು ತತ್ವಜ್ಞಾನ ಹೇಳುತ್ತಿದ್ದರೂ ಅಂತರ್ಯದಲ್ಲಿ ಅವರ ಮನಸ್ಸು ಕಳವಳಪಡುತ್ತಿತ್ತು. ಕಮಿಟಿಯಲ್ಲಿ ಸೇರಿದಂದಿನಿಂದ ರಾಧಾಬಾಯಿಯವರ ವಿಚಾರದಲ್ಲಿ ಅವರಿಗೆ ಅನಾದರ

ಣೆಯೇ ತೋರುತ್ತಿತ್ತು. ಆದರೆ ಅವರು ಸತ್ತನಂತರ ಅವರ ಒಂದೊಂದೇ ಗುಣಗಳು ನೆನಪಿಗೆ ಬಂದು ದುಃಖವು ಉಕ್ಕೇರುತ್ತಿತ್ತು. ಒಂದೊಂದು ಸಾರೆ ದುಃಖದ ಭರದಲ್ಲಿ ಸನ್ಯಾಸಿಯಾಗಿ ಬಿಡಬೇಕೆಂದು ಮನಸ್ಸು ಮಾಡುವರು. ಆದರೆ ಕಮಿಟಿಯ ಸಭಾಸದರು ಏನೆನ್ನುವರು ? ಎಂಬ ಕಲ್ಪನೆ ಬಂದೊಡನೆ ಇದನ್ನು ಮರೆತು ಬಿಡುವರು. ಕಮಿಟಿಯು ಮುಖಪತ್ರದಲ್ಲಿ ರಾಘವಾಚಾರ್ಯರ ನಿಧನದ ಸಂಬಂಧವಾದ ಶೋಕಜನಕ ಲೇಖನವನ್ನೂ ಮತ್ತು ಇನ್ನು ಮೇಲೆ ಸಮಾಜೋದ್ಧಾರದ ಕೆಲಸವನ್ನು ಕೃಷ್ಣರಾಯರು ಒಳ್ಳೇ ಹುರುಪಿನಿಂದ ಮಾಡಲಿರುವರು. ಒಳ್ಳೇ ಸಮಯವನ್ನು ತಂದುಕೊಟ್ಟಿರೆಂದೂ ಅದನ್ನು ಅವರು ಸಾರ್ಥಕಪಡಿಸಿಕೊಳ್ಳಬೇಕೆಂದೂ ನಾವು ನಂಬುತ್ತೇವೆ. ಎಂಬ ಪ್ರೋತ್ಸಾಹಪರವಾದ ಲೇಖಗಳು ಪ್ರಕಟವಾದವು. ಆದರೆ ಕೃಷ್ಣರಾಯರ ಲಕ್ಷ್ಯ ಈ ಕಡೆ ಹೋಗದೆ ಪುನಃ ಪುನಃ ಸನ್ಯಾಸಾಶ್ರಮದ ಕಡೆಗೆ ತಿರುಗುತಿತ್ತು.

ಕಮಿಟಿಯ ಸೂಚನೆಯಂತೆ ಅವರು ಕಾರ್ಯಕ್ರಮವನ್ನು ನಡಿಸಿದ್ದರೆ ಅವರಿಗೆ ಇನ್ನೂ ಪ್ರೋತ್ಸಾಹವು ಸಿಗುತ್ತಿತ್ತು. ಆದರೆ ಅವರ ಮನಸ್ಸು ಬೇರೆ ಕಡೆ ಕೆಲಸ ಮಾಡಲು ಪ್ರಾರಂಭಿಸಿತ್ತಾದ್ದರಿಂದ ಕಮಿಟಿಯ ಕೆಲಸ ಮಾಡಲು ಅವರಿಂದ ಸಾಗಲಿಲ್ಲ. ಕಮಿಟಿಯವರೂ ಅವರನ್ನು ಅಪಹಾಸ್ಯ ಮಾಡಲಾರಂಭಿಸಿದರು. ಮನಸ್ಸಿನ ನಿಶ್ಚಯದಂತೆ ಇತ್ತ ಸನ್ಯಾಸಿಯೂ ಆಗಲಿಲ್ಲ. ಕಮಿಟಿಯ ಕೆಲಸಗಳೂ ಸಾಗಲಿಲ್ಲ. ಹೀಗಾಗಿ ಕೃಷ್ಣರಾಯರು ಯಾವ ಕೆಲಸವನ್ನೂ ಮಾಡದೆ [illegible] ಬಿಟ್ಟು ರಾಘವಾಸದನಕ್ಕೆ ಹೋಗಿ, ಹಿಂದೆ ನಡೆದ ಸಂಗತಿಗಳನ್ನು ಒಂದೊಂದಾಗಿ ನೆನಸಿಕೊಳ್ಳುವುದು, ಅಳುವುದು, ಈ ಕೆಲಸದಲ್ಲಿ ತೊಡಗಿದರು. ಮನೆಗೆ ಬಂದ ಇಷ್ಟಮಿತ್ರರಿಗೆ ತನ್ನ ಹೆಂಡತಿಯ ಮರಣದಲ್ಲಿ ಏನೋ ದೈವತಂತ್ರವಿರುವುದಾಗಿ ಬಾಯಾಡಂಬರಕ್ಕಾಗಿ ಹೇಳುತ್ತಿದ್ದರು. ಆದರೆ ಆಕೆಯ ಮರಣಕ್ಕೆ ತಾನೇ ಕಾರಣೀಭೂತನೆಂದು ನೆನಪಿಗೆ ಬಂದೊಡನೆಯೆ ಕಂಠವು ಬಿಗಿದು ಸಣ್ಣ ಬಾಲಕರಂತೆ ಅಳುವರು. ಈಗ ಹೆಂಡತಿಯ ಪತಿನಿಷ್ಠತೆಯ, ಗುಣವು ಅವರಿಗೆ ತಿಳಿಯ ಹತ್ತಿತು.

ರಾಧಾಬಾಯಿಗೆ ಬಾಯಿಲೆ ಜಾಸ್ತಿ ( ಹೆಚ್ಚು ) ಆದ ದಿನ ನಿರ್ಮಲೆಗೆ ಮುಂಚಿತವಾಗಿಯೇ ಕೃಷ್ಣರಾಯರು ಹೇಳಿಕಳಿಸಿದ್ದರು. ಆದರೆ ಆ ದಿವಸ ರೋಮ ದೇಶದ ಚರಿತ್ರೆಯ ವಿಷಯವಾಗಿ ಒಂದು ವ್ಯಾಖ್ಯಾನವಾಗುತ್ತಿತ್ತು. ಇದನ್ನು ಬಿಟ್ಟು ತಾಯಿಯ ಅಂತ್ಯಕಾಲಕ್ಕೆ ಒದಗುವಸಮಯವು ದೊರೆಯಲಿಲ್ಲ. ವಿದ್ಯಾಭ್ಯಾಸದ ಹುಚ್ಚು ಇಷ್ಟರವರೆಗೆ ಆಕೆಯನ್ನು ತಳ್ಳಿತ್ತು. ಕಾಲನಾದರೂ ನಿರ್ಮಲೆಯ ವ್ಯಾಖ್ಯಾನಕೇಳಿ ತನ್ನ ಅನುಕೂಲದ ಪ್ರಕಾರ ಬರುವವರೆಗಾದರೂ ರಾಧಾಬಾಯಿಯನ್ನು ಮುಟ್ಟಬಾರದಾಗಿತ್ತು. ಅವನಿಗೆ ದಯವೆಲ್ಲಿ ಬರಬೇಕು? ನಿರ್ಮಲೆಯು ವ್ಯಾಖ್ಯಾನ ಮುಗಿಸಿ ಬರುವುದರೊಳಗೆ ತಾಯಿಯು ಪರಲೋಕವಾಸಕ್ಕೆ ತೆರಳಿದ್ದಳು. ತಾಯಿಯ ಮರಣದ ಮೂರನೆ ದಿವಸವೇ ನನ್ನ ಅಭ್ಯಾಸ ಹಿಂದಾಗುವ ನೆವ ಹೇಳಿ, ಮದರಾಸಿಗೆ ಹೊರಡಲು ಸಿದ್ಧಳಾದಳು. ಆದರೆ ಸೂತಕ ಹೋಗುವವರೆಗೆ ಇರಬೇಕಾಗಿ ತಂದೆಯು ಹೇಳಿದ್ದರಿಂದ ಹ್ಯಾಗಾದರೂ ಮಾಡಿ ಇರಲೇಬೇಕಾಯಿತು. ಆದರೆ ದಿನವೂ ನನ್ನ ರೇಖಾಗಣಿತದ ಪಾಠತಪ್ಪಿತು. ಕನ್ನಡ ಭಾಷೆಯ ವ್ಯಾಖ್ಯಾನ ತಪ್ಪಿತು. ಅದು- ಇದು ತಪ್ಪಿತು. ಎಂದು ಗುಣು ಗುಣು ಮಾತಾಡುತ್ತಲೇ ಇದ್ದಳು. ಹದಿನಾಲ್ಕು ದಿವಸ ಮುಗಿದ ಮರುದಿನವೇ ಮದ್ರಾಸಿಗೆ ಹೋಗುವ ತಯಾರಿಯಲ್ಲಿದ್ದಳು. ಅಷ್ಟರೊಳಗೆ ಕೃಷ್ಣರಾಯರು ಇನ್ನೂ ಎಂಟು ದಿವಸ ತಡೆದು ಹೋಗು. ಅಷ್ಟರಲ್ಲಿ ನಿನ್ನ ಅಭ್ಯಾಸವೇನೂ ಕೆಡುವದಾಗಿಲ್ಲ; ಕೆಟ್ಟರೂ ವಿನಾಯಕನಿದ್ದಾನೆ. ಹೇಳಿಕೊಡುತ್ತಾನೆ. ಎಂದು ಬಹಳವಾಗಿ ಹೇಳಿದರೂ ಆಕೆಯು ಕೇಳದೆ ಹೊರಟೇ ಹೋದಳು. ತನ್ನ ಅಜ್ಞೆಯನ್ನು ಮೀರಿ ಹೋದದ್ದು ಕೃಷ್ಣರಾಯರಿಗೆ ಮನಸ್ಸಿನಲ್ಲಿ ತುಂಬಾವ್ಯಸನಕ್ಕೆ ಕಾರಣವಾಯಿತು ; ಅವರು ಅವರಿಂದಲೇ ಕ್ಷೀಣವಾಗಹತ್ತಿದರು.

ವಿಶ್ವವಿದ್ಯಾಲಯಕ್ಕೆ ಸೇರಿದ ಲಾಗಾಯ್ತು ನಿರ್ಮಲೆಯು ವಸತಿಗ್ರಹ (ಹಾಸ್ಟೇಲ್) ದಲ್ಲಿಯೇ ಇರುತ್ತಿದ್ದಳು. ಅವಳು ಡಾಕ್ಟರರ ಮನೆಯಲ್ಲಿಯೇ ಇರಬೇಕೆಂಬ ಅಭಿಪ್ರಾಯವು ಕೃಷ್ಣರಾಯರಿಗಿತ್ತು. ಆದರೆ ಸ್ಕೂಲಿಗೂ ಮನೆಗೂ ಬಹಳದೂರ ಇರುವದನ್ನು, ಹಾಸ್ಟಲಿನಲ್ಲಿರುವುದರಿಂದ ವಿದ್ಯಾವ್ಯಾಸಂಗಕ್ಕೆ ಒಳ್ಳೇ ಸಹಾಯ ಸಿಗುವವಾಗಿ ನಿರ್ಮಲೆಯು ಹೇಳಿದ್ದರಿಂದ ಕೃಷ್ಣರಾಯರು ಅದನ್ನು ಒಪ್ಪಿ, ವಸತಿಗೃಹದಲ್ಲಿಯೇ ಇರಲು ಸಮ್ಮತಿಸಿದರು. ಮತ್ತು ವಿನಾಯಕನ

ಮಧುರಭಾಷಣವೂ ಅವನ ಸಹವಾಸವೂ ನಿರ್ಮಲೆಗೆ ಸರಿಬರದ್ದರಿಂದ ಆವಳು ಡಾಕ್ಟರರ ಮನೆಬಿಡುವ ಆಲೋಚನೆ ಮಾಡಿದ್ದಳು. ( ಇದನ್ನು ಯಾರಿಗೂ ತಿಳಿಸಿರಲಿಲ್ಲ. )

ವಿಚಾರಮಾಡಿ ನೋಡಿದರೆ ಇದರಲ್ಲಿ ನಿರ್ಮಲೆಯ ತಪ್ಪು ಏನೂ ಇರಲಿಲ್ಲ. ಯಾಕಂದರೆ ಮನೆಯ ಸ್ಥಿತಿಯು ಚೆನ್ನಾಗಿತ್ತು ಮತ್ತು ಒಬ್ಬಳೇ ಒಬ್ಬ ಮಗಳು, ಚಿಕ್ಕಂದಿನಿಂದಲೂ ಸಮಾಜಸೇವಾ ಧುರೀಣ ಮಹಾಶಯರ ಸಹವಾಸ, ಮತ್ತು ಸ್ತ್ರೀ-ಪುರುಷರ ಮಿಶ್ರಸಹವಾಸದಲ್ಲಿ ಬೆಳೆದವಳು. ಮಾತೃಭಾಷೆಯ ಸ್ವಲ್ಪ ಶಿಕ್ಷಣವಾದೊಡನೆಯೆ ಇಂಗ್ಲಿಷ್‌ಭಾಷೆಯ ಸಹವಾಸ, ಪಾಶ್ಚಿಮಾತ್ಯರ ರೀತಿ ನೀತಿಗಳನ್ನು ಹೊಗಳುವ ಮಾಸಿಕ ಪುಸ್ತಕಗಳವಾಚನ, ಇಂಥ ಸಹವಾಸದಲ್ಲಿ ಅವಳು ಚಿಕ್ಕಂದಿನಿಂದಲೂ ಬೆಳೆದವಳು. ಕಾರಣ ಆಕೆಯ ನಡತೆಯೂ ಅದಕ್ಕನುರೂಪವಾಗಿಯೇ ಇತ್ತು. ಸದ್ಯ ಕೃಷ್ಣರಾಯರ ಮನಸ್ಸು ಸರಿಯಾಗಿರಲಿಲ್ಲವಾದ್ದರಿಂದ ಹುಡುಗಿಯ ವರ್ತನವು ಸ್ತ್ರೀ ಶಿಕ್ಷಣಕ್ಕೆ ಅಪವಾದವಾಗಲು ಪ್ರಾರಂಭಿಸಿತು.

ನಾನು ಕಮಿಟಿಯಲ್ಲಿ ಸೇರಿದ್ದೇ ತಪ್ಪು. ಅದರಲ್ಲೂ ಅದರ ನಿಯಮದಂತೆ ಆಚರಣೆ ಇಟ್ಟಿದ್ದು ಇನ್ನೂ ತಪ್ಪೆಂದು ಈಗ ಕೃಷ್ಣರಾಯರಿಗೆ ಅನಿಸಹತ್ತಿತು. ಇದೇ ಸಮಯಕ್ಕೆ ಸನಾತನ ಪತ್ರಿಕೆಯಲ್ಲಿ ಕಮಿಟಿಯ ಟೀಕಾತ್ಮಕ ಲೇಖನಗಳನ್ನು ಬರೆಯಲು ಪ್ರಾರಂಭಿಸಿದ್ದರು. ಈ ಪತ್ರಿಕೆಯ ಸಂಪಾದಕರು ಮೊದಲು ಕಮಿಟಿಯ ಕಾರ್ಯದರ್ಶಿಗಳಾಗಿದ್ದರು. ಈಚೆಗೆ ಅವರ ಮತಬದಲಾಗಿ, ಅವರ ಅಭಿಪ್ರಾಯವನ್ನು ಜನಗಳಲ್ಲಿ ಹರಡಬೇಕೆಂದು ಸನಾತನ ಪತ್ರಿಕೆಯನ್ನು ಹೊರಡಿಸಿದ್ದರು. ಮತ್ತು ಇವರು ಪದವೀಧರರು ಪಶ್ಚಿಮದೇಶದಲ್ಲಿ ಸಂಚಾರಮಾಡಿ ಅಲ್ಲಿಯ ಸುಧಾರಣೆಯನ್ನೂ ಸೂಕ್ಷ್ಮವಾಗಿ ತಿಳಿದುಕೊಂಡಿದ್ದರು. ಮತ್ತು ಅವರು ಕೇವಲ ಪ್ರಾಮಾಣಿಕರಿದ್ದರು. ನಿಜವಾದ ಸಂಗತಿಗಳನ್ನು ಹೇಳಲು ಅವರು ಅಂಜುತ್ತಿರಲಿಲ್ಲ. ಕಾರಣ ಕಮಿಟಿಯನ್ನು ಬಿಟ್ಟಮೇಲೂ ಜನರು ಅವರನ್ನು ಕೊಂಡಾಡುತ್ತಿದ್ದರು. ಅವರು ನಿಶ್ಚಿತತಪ್ಪಿ ಕಮಿಟಿಯಲ್ಲಿ ಸೇರಿದಂತೆ ತೋರುತ್ತದೆಂದು ಆ ಜನರು ತಿಳಿದುಕೊಳ್ಳುತ್ತಿದ್ದರು. ಸನಾತನ ಪತ್ರಿಕೆಯನ್ನು ನೋಡಿದೊಡನೆ ಕೃಷ್ಣರಾಯರಿಗೆ ತಮ್ಮ ಆಲೋಚನೆಯು ನಿಜವಾಯಿತೆಂದು ಸಂತೋಷಬಟ್ಟರು.

ಸನಾತನಪತ್ರಿಕಾ ಸಂಪಾದಕರಿಗೂ ಕೃಷ್ಣರಾಯರಿಗೂ ಈಚೆಗೆ ಸ್ನೇಹ ಬೆಳೆದಿತ್ತು. ಕಾರಣ ಅವರ ವಿಚಾರದಲ್ಲಿ ರಾಯರಿಗೆ ಆದರ ಬಹಳವಾಗಿರುವುದು ಸಹಜ. ಕಮಿಟಿಯನ್ನು ಬಿಟ್ಟನಂತರ ಸನಾತನ ಪತ್ರಿಕೆ ಹೊರಡಿಸುವ ವಿಚಾರವನ್ನು ಅವರು ಜಾಹೀರಾತ ಮೂಲಕ ತಿಳಿಸಿದ್ದರು. ಇದನ್ನು ನೋಡಬೇಕೆಂದು ಕಮಿಟಿಯ ಮೆಂಬರರೆಲ್ಲರೂ ಉತ್ಸಾಹಿಗಳಾಗಿದ್ದರು.

ಮೊದಲನೆಯ ಅಂಕದಲ್ಲಿಯೇ ಜಾತಿಭೇದದ ಪ್ರಶ್ನೆಯನ್ನು ತೆಗೆದುಕೊಂಡು ಪ್ರಾಚೀನ ಮತ್ತು ಅರ್ವಾಚೀನ ಶಾಸ್ತ್ರಾಧಾರದಿಂದ ಪ್ರಕೃತ ಜನರಿಗೆ ತಿಳಿಯುವಂತೆ ಲೇಖ ಬರೆದಿದ್ದರು. ಜಾತಿಭೇದವು ಸಮಾಜದ ಉನ್ನತಿಗೆ ಒಂದು ಕಾರಣವಿದೆ. ಜಗತ್ತಿನೊಳಗೆ ಯಾವುದಾದರೂ ಒಂದು ರೀತಿಯಿಂದ ಜಾತಿಭೇದವು ಇದ್ದೇ ಇರುತ್ತದೆ. ಆದರೆ ಅದು ಪ್ರಗತಿಯ ಉಚ್ಚನೀಚತರವಾಗಲಿ ಅಥವಾ ಐಶ್ವರ್ಯದ ಕಮ್ಮಿ ಜಾಸ್ತಿಯ ಮೇಲಾಗಲಿ ಅಥವಾ ಜೀವಿ ಭೇದಗಳಿಂದಾಗಲಿ ಇರಲಿ. ಯಾವ ಜಾತಿಯಲ್ಲಿ ಸಂತೋಷ ಕೈಕ್ಯೇಸ್ವರ ಎಲ್ಲರನ್ನೂ ಒಟ್ಟುಗೂಡಿಸುವ ಪ್ರಯತ್ನನಡೆದಿದೆ ಅದು ಎಲ್ಲರಿಗೂ ಮಾನ್ಯವಿರುವುದೋ? ಹಾಗೆಯೇ ಈಚೆಗೆ ಹೊಸದಾಗಿ ಹೊರಡುವ ಜ್ಞಾತಿಪರಿಷದುಗಳು ಜಾತಿಗಳನ್ನೆಲ್ಲ ಒಟ್ಟುಗೂಡಿಸಲು ಮಾನ್ಯಕೊಡುವವೇ? ನಾವೆಲ್ಲ ವಿಶ್ವಬಂಧುಗಳು ಎಲ್ಲರೂ ಒಬ್ಬದೇವರ ಮಕ್ಕಳು ಎಂದು ದೊಡ್ಡದೊಡ್ಡ ಶಬ್ದಗಳನ್ನು ಉಪಯೋಗಿಸಿ ಹೇಳುವುದರಿಂದಲೂ, ಬರೆಯುವದರಿಂದಲೂ ಜಾತಿಭೇದಗಳು ಹೋಗುವವೆ? ಎಲ್ಲರಲ್ಲಿ ಸರ್ವಾತ್ಮಭಾವ ಹುಟ್ಟಿದರೆ ತನ್ನಿಂದತಾನೇ ಜಾತಿಭೇದಭಾವವು ತೊಲಗುವದು. ಅದು ಹೋಗುವವರೆಗೂ ಜಾತಿಧರ್ಮಗಳನ್ನು ಪಾಲಿಸಬೇಕು. ಹೀಗೆಂದು ರಾಮಕೃಷ್ಣಪರಮಹಂಸರು ಕಂಠೋಕ್ತವಾಗಿ ಹೇಳಿರುತ್ತಾರೆ. ಸಮಾಜದ ಅಭಿವೃದ್ಧಿಯ ದೃಷ್ಟಿಯಿಂದ ಜಾತಿಗಳನ್ನು ಒಟ್ಟುಗೂಡಿಸುವುದು ಹಾನಿಕರವಾಗಿದೆ. ಆದರೆ ಅತಿಭೇದದ ಪರಂಪರೆಗಳನ್ನು ಕಡಿಮೆ ಮಾಡುವುದು ಯೋಗ್ಯವಿದೆ. ಅದನ್ನು ಆಯಾ ಸಂಸ್ಕೃತಿಯ ಮತ್ತು ಪೂರ್ವಪರಂಪರೆಯ ಸಹಾಯದಿಂದ ವಿಚಾರಮಾಡಬೇಕಾಗಿದೆ. ಇಂಥ ವಾದವನ್ನು ಬಿಡಬೇಕಾದರೆ ಯುಕ್ತಿವಾದಗಳಿಂದಲೂ, ಬುದ್ಧಿಚತುರತೆಯಿಂದಲೂ ಬಿಡಿಸಿದರೆ ಅದು ತಪ್ಪುದಾರಿಯಾಗುವ

ವಿಲ್ಲವೇ ? ಆದ್ದರಿಂದ ಎಲ್ಲರನ್ನು ಒಟ್ಟುಗೂಡಿಸುವ ಸಭೆ (ಕಮಿಟಿ)ಗಳು ಈ ವಿಚಾರವನ್ನು ಪುನರಾಲೋಚಿಸಬೇಕು.

ಎರಡನೆಯ ಅಂಕದಲ್ಲಿ ಸ್ತ್ರೀ ಶಿಕ್ಷಣದ ವಿಚಾರವು ಪ್ರಕಟವಾಗಿತ್ತು. ಸ್ತ್ರೀ ಶಿಕ್ಷಣದ ಈಗಿನ ಪದ್ಧತಿಯು ಸಮಾಜ ಹಿತಕ್ಕೆ ಅಡ್ಡಿ ತರುವಂಥದಾಗಿದೆ, ಅದು ಆರ್ಯರ ಸಂಸ್ಕೃತಿಯನ್ನು ಕೆಡಿಸುತ್ತದೆ. ಕಾರಣ ಸ್ತ್ರೀ ಶಿಕ್ಷಣದಲ್ಲಿ ಬದಲಾವಣೆಯಾಗಬೇಕು.

ಮೂರನೆಯ ಅಂಕದಲ್ಲಿ ಪುನರ್ವಿವಾಹದ ವಿಚಾರವನ್ನು ಮಾಡಿದ್ದರು. ಅದರಲ್ಲಿ ಕಮಿಟಿಯು ಪ್ರೋತ್ಸಾಹದಿಂದ ಆದ ಲಗ್ನಗಳನ್ನು ಪೂರ್ಣ ಪರಿಷ್ಕರಣ ಮಾಡಿ, ದೋಷಗಳನ್ನು ತಿಳಿಸಿದ್ದರು. ಅನಾಥ ಬಾಲಿಕೆಯರನ್ನು ಉದ್ಧಾರ ಮಾಡಿದ ಭೂತದಯಾತ್ಮಕವಾದ ವಿಚಾರವನ್ನು ಎಲ್ಲರೂ ಒಪ್ಪುವರು. ಆದರ ಸಮಾಜ ಉದ್ಧಾರವನ್ನು ವಿಧವೆಯರು ಎಷ್ಟು ವರ್ತಿಮಾಡಬಹುದು. ಅದು ಅವರನ್ನು ಅವಲಂಬಿಸದೆ ಬಹುಜನ ಸಮಾಜದ ಸುಶೀಲಕ್ಕೆ ಅನುಸರಿಸಿರುತ್ತದೆ. ವಿಧವಾವಿವಾಹವು ರೂಢಿಯಲ್ಲಿರುವ ಎಷ್ಟೋ ದೇಶ ಮತ್ತು ಸಮಾಜಗಳು ಕೇವಲ ಹೀನಸ್ಥಿತಿಯಲ್ಲಿವೆ. ವಿಚಾರಿ ಮನುಷ್ಯರಿಗೆ ಹಿಂದು ಸ್ಥಾನದಲ್ಲಿಯೇ ಇವನ್ನು ನೋಡಬಹುದು. ಸಮಾಜದ ದೃಷ್ಟಿಯಿಂದ ವಿಧವಾವಿವಾಹಕ್ಕೆ ಅಷ್ಟು ಮಹತ್ವವಿಲ್ಲ; ಈ ಪ್ರಶ್ನೆಯನ್ನು ಪೂರ್ವಪರಂಪರೆ ಮತ್ತು ಆರ್ಯರ ಸಹಾಯದಿಂದ ಬಿಡಿಸಬೇಕಾಗಿದೆ. ಬರೀ ಭೂತದಯೆಯಿಂದ ಈ ಪ್ರಶ್ನೆಯನ್ನು ಬಿಡಿಸಬಾರದಾಗಿ ಕಮಿಟಿಗೆ ಎಚ್ಚರಿಕೆ ಕೊಟ್ಟಿದ್ದರು. ಒಟ್ಟಿನ ಮೇಲೆ ಕಮಿಟಿಯ ದೋಷಗಳನ್ನೆಲ್ಲಾ ಎತ್ತಿಹಿಡಿದು ಸಕಾರಣವಾಗಿ ಟೀಕೆಯು ಪತ್ರಿಕೆಯಲ್ಲಿ ಹೊರಡುತ್ತಿತ್ತು.

ಮೊದಲಿನ ಎರಡು ಅಂಕಗಳನ್ನು ಓದಿದೊಡನೆ ಕೃಷ್ಣರಾಯರಿಗೆ ತಮ್ಮ ಕಮಿಟಿಯ ತಪ್ಪುಗಳು ತಿಳಿಯಹತ್ತಿದವು. ಮತ್ತು ಕಮಿಟಿಯು ಕೆಲಸವು ಬಾಹ್ಯಾಡಂಬರಕ್ಕೆ ಚೆನ್ನಾಗಿ ತೋರಿದರೂ ಅಂತರಂಗದಲ್ಲಿ ಅದರ ಉಪಯೋಗ ಕಡಿಮೆ ಎಂಬುದನ್ನೂ, ಜ್ಞಾನಿಗಳು ಇದಕ್ಕೆ ಮೋಸಹೋಗಬಾರದಾಗಿಯೂ, ಸನಾತನ ಪತ್ರಿಕೆಯು ಹೊಗಳುತ್ತಿದ್ದ ಸಂಗತಿಯು ಕೃಷ್ಣರಾಯರಿಗೆ ಚೆನ್ನಾಗಿ ತಿಳಿಯಿತು. ಸನಾತನ ಪತ್ರಿಕೆಯ ವಿಚಾರಗಳು ಎಲ್ಲರಿಗೂ

ಮಾನ್ಯವಾಗುವಂಥವಿರುತ್ತಿದ್ದವು. ಆದರಲ್ಲಿಯೂ ಕೃಷ್ಣರಾಯರಂಥ ಚಾ-
ಣಾಕ್ಷ ಮತ್ತು ಬುದ್ಧಿವಂತರಿಗೆ ಮಾನ್ಯವಾದುದು ಆಶ್ಚರ್ಯವೇನು ! ಸನಾ
ತನ ಪತ್ರಿಕೆಯ ಅಂಕಗಳು ಕೈಸೇರಿದಂತೆಲ್ಲ ಕೃಷ್ಣರಾಯರ ಮನಸ್ಸು ಕಮಿಾ
ಟಿಯಿಂದ ಬಿಡುಗಡೆ ಹೊಂದಲಾರಂಭಿಸಿತು. ಮತ್ತೆ ಅವರು ಚಿಂತೆಯಿಂದ
ಕ್ಷೀಣಿಸುತ್ತ ನಡೆದರು. ಇದನ್ನು ಸನಾತನವು ಇನ್ನೂ ಹೆಚ್ಚಿಸಿತು.

ತನ್ನ ಕಣ್ಮಣಿಗೆ ನಿರ್ಮಲೆಯನ್ನು ವಿನಾಯಕನಿಗೆ ಕೊಟ್ಟು ಲಗ್ನ
ಮಾಡಬೇಕೆಂತಲೂ ಸುಮ್ಮನೆ ಇದುವರೆಗೆ ಲಗ್ನದ ಅವಧಿ ( ವರ್ಷ )ಯನ್ನು
ಪೂರಿಸಿದಂತೆ ಇನ್ನು ಕಾಲಹರಣ ಮಾಡುವುದರಿಂದ ಆತ್ಮಘಾತವಾಗುವು
ದಾಗಿಯೂ ಆಲೋಚಿಸಿದರು.

ವಿನಾಯಕನು ಮೆಡಿಕಲ್ ಕಾಲೇಜಿನಲ್ಲಿ ಎರಡನೇ ವರ್ಷದ ವಿದ್ಯಾರ್ಥಿ
ಯಾಗಿದ್ದನು. ನಿರ್ಮಲೆಗೆ ವಿನಾಯಕನು ಯೋಗ್ಯವರನಲ್ಲವೆಂಬುದು ಕೃಷ್ಣ
ರಾಯರಿಗೆ ಗೊತ್ತು, ಆದರೂ ಮನೆಯಲ್ಲಿ ಹಣವಿದೆ. ಒಂದು ವೇಳೆ ಪರೀಕ್ಷೆ
ಯಲ್ಲಿ ತೇರ್ಗಡೆಯಾಗದಿದ್ದರೂ ಅನೇಕ ದೊಡ್ಡ ಮನುಷ್ಯರ ಪರಿಚಯವಿರು
ವದರಿಂದ ನೌಕರಿದೊರಕಿಸಿಕೊಳ್ಳಬಹುದು ಮತ್ತು ಸಂಬಂಧಿಗಳಾದ್ದರಿಂದ
ಹುಡುಗಿಗೆ ಸುಖವಾಗಬಹುದು ಎಂಬ ಆಲೋಚನೆಯ ಮೇಲೆ ವಿನಾಯ
ಕನಿಗೆ ನಿರ್ಮಲೆಯನ್ನು ಕೊಟ್ಟು ಲಗ್ನಮಾಡಲು ನಿಶ್ಚಯಿಸಿದ್ದರು.

ತನ್ನ ಮನಸ್ಸಿನ ವಿಚಾರವನ್ನೆಲ್ಲ ಡಾಕ್ಟರ ವಿಶ್ವಾಸರಾಯರಿಗೆ ತಿಳಿಸಲು
ಅವರು ಉಪಚಾರಕ್ಕಾಗಿ ಮತ್ತೆಲ್ಲಿಯಾದರೂ ಒಳ್ಳೇ ಸ್ಥಳನೋಡಿದರೆ ಅನು
ಕೂಲವೆಂದು ಹೇಳಿದರು. ಆದರೆ ಎಲ್ಲ ಭಾಗಗಳಲ್ಲಿಯೂ ತಮ್ಮ ಸಮ್ಮತಿಯು
ತೋರುವ ಲಕ್ಷಣವೂ ಕಾಣುತ್ತಿತ್ತು. ಯಾಕಂದರೆ ನಿರ್ಮಲೆಯಂಥ ಸೊಸೆ
ಸಿಗುವಾಗ ಬೇಡವೆಂದು ಹ್ಯಾಗೆ ಹೇಳಲಿಕ್ಕಾದೀತು! ಆದರೆ ವಯಸ್ಸಿನ
ನಿರ್ಣಯ ಸ್ವಲ್ಪ ಹೆಚ್ಚು ಕಡಿಮೆಯಾದರೂ ( ಅಂದರೆ ಕಮಿಾಟಿಗೆ ವಿರೋಧ
ವಾಗದಂತೆ ) ಇಬ್ಬರೂ ಅನುಸರಿಸುವಹಾಗಿದ್ದರು.

ಕಮಿಾಟಿಯ ನಿರ್ಣಯದಂತೆ ವಧೂವರರ ಅನುಮತಿಯನ್ನು ತೆಗೆದು
ಕೊಳ್ಳುವುದೂ ಮುಖ್ಯಸಂಗತಿಯಾಗಿತ್ತು. ವಿನಾಯಕನ ನಡಾವಳಿಯ
ಮೇಲಿಂದ ಅವನ ಒಪ್ಪಿಗೆ ಇರುವುದೆಂಬುದು ಸಹಜವಾಗಿ ಕಾಣುತ್ತಿತ್ತು.

ರಿಂದ ಅಭ್ಯಾಸದಲ್ಲಿ ಲಕ್ಷ್ಯವೂ ಪೂರ್ತಿ ಕಡಿಮೆಯಾಯಿತು. ಮೊದಲು ಅಭ್ಯಾಸದಿಂದ ಸಹಪಾಠಿಗಳು ಸೇರುತ್ತಿದ್ದರು. ಈಗ ಅದಿಲ್ಲದೆ ಅನಾಯಾಸವಾಗಿ ಹರಟೆ ಹೊಡೆಯಲು ಸಹಪಾಠಿಗಳು ನಾನು ತಾನೆಂದು ಬರುತ್ತಿದ್ದರು. ಅಂದರೆ ಒಟ್ಟಿನಮೇಲೆ ಅಭ್ಯಾಸ ಮಹತ್ವವು ಅವಳಿಗೆ ತಿಳಿಯದಂತಾಯಿತು.

ಅವಳು ವಿದ್ಯಾಭ್ಯಾಸದಲ್ಲಿ ತೋರಿಸುವ ಉತ್ಸಾಹವನ್ನು ಕೃಷ್ಣರಾಯರು ನೋಡಿ ಈಚೆಗೆ ಅವಳ ಮೇಲೆ ನಿಗಾ ಇರುವುದನ್ನು ಬಿಟ್ಟಿದ್ದರು. ಈ ಎಲ್ಲ ಕಾರಣದಿಂದ ಮಹಾವಿದ್ಯಾಲಯದ ಮೊದಲನೇ ವರ್ಷದ ಪರೀಕ್ಷೆಯಲ್ಲಿ ಅವಳು ತೇರ್ಗಡೆ ಹೊಂದಲಿಲ್ಲ. ಹೀಗಾದ್ದರಿಂದ ಅವಳಿಗೆ ಸ್ವಲ್ಪ ಅಸಮಾಧಾನವಾಯ್ತು. ಆದರೆ ಪರೀಕ್ಷೆಯಲ್ಲಿ ಏನಿರುವುದು? ನೀನು ಹೋದವರ್ಷವೇ ಒಂದನೇ ವರ್ಗದಲ್ಲಿ ಉತ್ತೀರ್ಣಳಾಗಿರುತ್ತೀ. ನಿನ್ನ ಯೋಗ್ಯತೆಯು ಎಲ್ಲಾ ಕಡೆಗೂ ಹಬ್ಬಿದೆ. ಎಂದು ಈಕೆಯ ಮಿತ್ರರೂ ಮೈತ್ರಿಣಿಯರೂ ಸಮಾಧಾನ ಹೇಳಿದ್ದರಿಂದ ಅದನ್ನು ಅವಳು ಅನುಮೋದಿಸಿ ಪರೀಕ್ಷೆಯ ವಿಷಯವನ್ನು ಮರೆತುಬಿಟ್ಟಳು. ಆದರೂ ಮಹಾವಿದ್ಯಾಲಯದಲ್ಲಿದ್ದು ಪುನಃ ಓದಬೇಕೆಂಬುದನ್ನು ನಿಶ್ಚಯಮಾಡಿದಳು. ಆದರೆ ಆಕೆಯ ವಿದ್ಯೆಯು ಇಲ್ಲಿಗೆ ಮುಗಿದಂತೆ ತೋರುತ್ತದೆ! ಯಾಕಂದರೆ ಕಮಿಟಿಯ ಸಹಾಯದಿಂದ ನಡೆಯುತ್ತಿದ್ದ ಬಾಲಿಕಾ ಪಾಠಶಾಲೆಯ ಮುಖ್ಯೋಪಾಧ್ಯಾಯಿನಿಯ ಜಾಗವು ಖಾಲಿ ಇತ್ತು. ಈ ಸ್ಥಳವನ್ನು ನಿರ್ಮಲೆಗೆ ನೋಡಬೇಕಾಗಿ ಎಷ್ಟೋ ಉತ್ಸಾಹಿ ಸ್ತ್ರೀಯರು ಸೂಚಿಸಿದರು. ನಿರ್ಮಲೆಯ ಯೋಗ್ಯತೆಯ ಬಗ್ಗೆ ಯಾರಿಂದಲೂ ಆಕ್ಷೇಪಣೆ ಬರಲು ಶಕ್ಯವಿರಲಿಲ್ಲ ಆದರೂ ಯೋಗ್ಯತೆಯ ಮತ್ತು ಜವಾಬದಾರಿಯುಳ್ಳ ಈ ಕೆಲಸಕ್ಕೆ ಕಡಿಮೆ ವಯಸ್ಸಿನ ಮತ್ತು ಅನುಭವವಿಲ್ಲದ ಇವಳನ್ನು ನೇಮಿಸಲು ದೂರದರ್ಶಿಗಳಾದ ಕೆಲ ಮೆಂಬರರು ಒಪ್ಪದ್ದರಿಂದ ಈ ಕೆಲಸ ಆಕೆಗೆ ಸಿಗಲಿಲ್ಲ. ಆದರೆ ಆ ವಿಷಯದ ಚರ್ಚೆಯಿಂದ ಅವಳಿಗೆ ತಾನು ತುಂಬಾ ಯೋಗ್ಯವಂತಳೆಂಬುದನ್ನು ತಿಳಿದುಕೊಂಡಳು. ಆ ಸ್ಥಳಕ್ಕೆ ಮಾಸಕ್ಕೆ ಇನ್ನೂರಾ ಐವತ್ತು (೨೫೦) ರೂಪಾಯಿ ಸಂಬಳವಿತ್ತು. ಕಾರಣ ಅವಳಿಗೆ ಅಸಂಭಾವಕ್ಕೆ ಕಾರಣವಾಯಿತು.

ಬರಬರುತ್ತಾ ಅಭ್ಯಾಸದಲ್ಲಿ ಅವಳಿಗೆ ಅಲಕ್ಷ್ಯವುಂಟಾಗಿ ಕಮೀಟಿಯಲ್ಲಿ ಉತ್ಸಾಹದಿಂದ ಕೆಲಸ ಮಾಡಬೇಕೆಂಬ ಮನಸ್ಸು ಹೆಚ್ಚು ಹೆಚ್ಚು ಹಾತೊರೆಯಲಾರಂಭಿಸಿತು. ಅದಕ್ಕನುಸರಿಸಿ ನಾತಾಳ ( X'mas ) ರಜೆಯಲ್ಲಿ ಸ್ಕೂಲಿಗೆ ನಮಸ್ಕಾರಮಾಡಿ ಬಿಟ್ಟಳು.

ತಮ್ಮ ಅಭಿಪ್ರಾಯವಿಲ್ಲದೆ ಮಹಾವಿದ್ಯಾಲಯವನ್ನು ಬಿಟ್ಟಿದ್ದಕ್ಕೆ ಕೃಷ್ಣರಾಯರಿಗೆ ಮೊದಲು ಸ್ವಲ್ಪ ಸಿಟ್ಟು ಬಂತು. ಆದರೆ ವಿದ್ಯಾಭ್ಯಾಸ ಬಿಟ್ಟಿದ್ದಕ್ಕೋಸ್ಕರ ಸಂತೋಷವೇ ಆಯಿತು. ಯಾಕಂದರೆ ಲಗ್ನದ ತೊಂದರೆಗಳಲ್ಲಿ ಒಂದು ತೊಂದರೆ ದೂರಾದಂತೆಯೇ ಸರಿ. ಲಗ್ನವಾದೊಡನೆ ಕಮೀಟಿಯ ವಾಸನೆಯು ತನ್ನಿಂದ ತಾನೇ ಬಿಡಬಹುದು. ಎಲ್ಲ ಕೆಲಸಗಳು ಸರಿಯಾಗಿ ನಡೆಯಬಹುದೆಂದು ಕೃಷ್ಣರಾಯರು ಮನಸಿನಲ್ಲಿ ಮಂಡಿಗೆ ತಿಂದರು.

ನಿರ್ಮಲೆಯು ವಿಶ್ವವಿದ್ಯಾಲಯವನ್ನು ಬಿಟ್ಟನಂತರ ರಾಧಾಸದನಕ್ಕೆ ಹೋಗದೆ ಕಮೀಟಿಯ ಕೆಲಸ ಮಾಡಲು ಅನುಕೂಲವಾಗುವುದೆಂದು ಮದರಾಸಿನ ಪಥಿಕಾಶ್ರಮದಲ್ಲಿಯೇ ಉಳಿದಳು.

ಕೃಷ್ಣರಾಯರು ಎರಡು ದಿವಸದ ಮಾತಿಗೆ ಬಂದು ಹೋಗಬೇಕೆಂದು ಬರೆದ ಕಾಗದಕ್ಕೆ ನನಗೆ ಇಂಥಾ ಸಭೆಯ ಅಧ್ಯಕ್ಷಸ್ಥಾನವನ್ನು ಅಂಗೀಕರಿಸಬೇಕಾಗಿದೆ. ಎಂಟು ದಿವಸ ಅವಕಾಶವಿಲ್ಲ. ಅವಕಾಶವಿದ್ದಾಗ ಬರುತ್ತೇನೆ. ಇದೇ ರೀತಿ ಕಾಗದಗಳು ಹೋಗುತ್ತಲೇ ಇದ್ದವು. ಆದರೆ ಎರಡು ದಿವಸದ ಪುರಸತ್ತು ಎರಡೆರಡು ಮೂರು ಮೂರು ತಿಂಗಳಾದರೂ ಸಿಕ್ಕುತ್ತಿರಲಿಲ್ಲ ಅಲ್ಲಿಯ ಸ್ಥಿತಿಯೂ ಹಾಗೆಯೇ ಇತ್ತು. ಆಮಂತ್ರಣೆಯ ಮೇಲೆ ಆಮಂತ್ರಣೆಗಳು ಬರುತ್ತಿದ್ದವು. ಅವುಗಳೆಲ್ಲವನ್ನೂ ಸ್ವೀಕರಿಸಿ ಒಂದೂ ತಪ್ಪದಂತೆ ಕೆಲಸ ಸಾಗಿಸುತ್ತಿದ್ದಳು.

ನಾಲ್ಕು ತಿಂಗಳ ಮೇಲೆ ಒಂದು ದಿವಸ ಅವಕಾಶವಿಟ್ಟುಕೊಂಡು ನಿರ್ಮಲೆಯು ರಾಧಾಸದನಕ್ಕೆ ಹೋಗಿದ್ದಳು. ಅವಳು ಬಂದೊಡನೆ ಕೃಷ್ಣರಾಯರು ಲಗ್ನದ ವಿಚಾರವನ್ನು ತಿಳಿಸಿದರು.

**ನಿರ್ಮಲೆ:**— ಕಮೀಟಿಯ ರೂಲ್ಸಿನಂತೆ ನನ್ನ ವಯಸ್ಸು ಕೂಡಾ ಆಗಿರುವುದಿಲ್ಲ. ಅದಕ್ಕೆ ಇನ್ನೂ ಏಳು ತಿಂಗಳು ಕಡಿಮೆಯಾಗಿವೆ. ಅದರಲ್ಲೂ

ನಾನೇ ಕಮಿಟಿಯ ಕಾರ್ಯಗಳನ್ನೆಲ್ಲಾ ನನ್ನ ಮೇಲೆ ವಹಿಸಿಕೊಂಡಿರುತ್ತೇನೆ. ಇಂಥ ಸ್ಥಿತಿಯಲ್ಲಿ ಲಗ್ನದ ರಗಳೆಯು ನನ್ನ ಮೇಲೆ ಬಂದದ್ದು ಆಶ್ಚರ್ಯದ ಸಂಗತಿಯು. ನೀವು ಕಮಿಟಿಯಲ್ಲಿ ಮಾಡಿದ ಪ್ರತಿಜ್ಞೆಯು ಈಗ ಎಲ್ಲಿ ಹೋಯಿತು? ಮತ್ತು ಲಗ್ನದ ವಿಚಾರ ಇಷ್ಟು ಅವಸರವೇಕೆ? ಲಗ್ನದ ದಿವಸ ಬಂದವೆಂದರೆ ಲಗ್ನವಾಗಿಯೇ ತೀರುವದು. ಒಂದು ವೇಳೆ ಲಗ್ನವಾಗಲಿಲ್ಲೆಂದು ತಿಳಿಯಿರಿ, ಅದರಿಂದ ಅಪಾಯವೇನು. ಲಗ್ನದಲ್ಲಿಯೇ ಸ್ತ್ರೀಯರ ಮೋಕ್ಷವಿಲ್ಲ, ಎಂಬುದನ್ನು ನಾನು ನನ್ನ ಸ್ವಂತ ಉದಾಹರಣೆಯಿಂದ ತೋರಿಸಬಲ್ಲೆನು. ಲಗ್ನದ ವಿಚಾರದಲ್ಲಿ ಈಗಿರುವ ಈ ದುಷ್ಟ ಅಭ್ಯಾಸವನ್ನು ತೆಗೆದು ಹಾಕುವೆನು.

ನಿರ್ಮಲೆಯ ವಿಚಾರವು ಈ ರೀತಿ ದುಂಡಾಗಿರುವದಾಗಿ ಕೃಷ್ಣರಾಯರಿಗೆ ತಿಳಿದಿರಲಿಲ್ಲ. ನಿರ್ಮಲೇ" ನನ್ನ ಕಣ್ಣು ಎದುರಿಗೆ ನಿನ್ನ ಲಗ್ನವಾಗಬೇಕೆಂದು ನನಗೆ ತುಂಬಾ ಅಭಿಲಾಷೆ ಇದೆ. ಅಲ್ಲದೆ ಕಮಿಟಿಯ ರೂಲಿಗೆ ಏಳೇ ತಿಂಗಳು ಮಾತ್ರ ಕಡಿಮೆಯಾಗಿದೆ. ಅದೇನು ಅಷ್ಟು ಮಹತ್ವವಾಗಲಾರದು. ವಗೈರೆ ಅನೇಕ ತರದ ಸಮಂಜಸವಾದ ಮಾತುಗಳನ್ನು ಹೇಳಿದರೂ ಅವಳು ತನ್ನ ಅಭಿಪ್ರಾಯವನ್ನು ಬದಲಿಸಲಿಲ್ಲ.

ಕೃಷ್ಣರಾಯರ ಮನಸ್ಸಿಗೆ ತುಂಬಾ ವ್ಯಸನವಾಯಿತು. ವ್ಯಸನವಾಗಿ ಏನು ಮಾಡುತ್ತಾರೆ? ನಗಿಂತಲೂ ಬೇರೆಯವರಿಂದ ಈ ಸಂಗತಿ ಹೇಳಿಸಬೇಕೆಂದೂ ಅದರಿಂದಲಾದರೂ ಆಕೆಯ ಮನಸ್ಸು ಒಪ್ಪಬಹುದಾಗಿದೆಂದು ಆಲೋಚಿಸಿ ಕಮಿಟಿಯ ಒಬ್ಬಿಬ್ಬ ಸಭಾಸದರಿಂದಲೂ ಹೇಳಿಸಿದ್ದೂ ಆಯಿತು. ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಸನಾತನ ಪತ್ರಿಕಾಕರ್ತರಿಂದಲೂ ಹೇಳಿಸಿ ನೋಡಿದರು. ಏನು ಮಾಡಿದರೂ ಅವಳು ತನ್ನ ಹಟವನ್ನು ಬಿಡಲಿಲ್ಲ. ಮಗಳ ಲಗ್ನವನ್ನು ನೋಡುವದು ನನ್ನ ಅದೃಷ್ಟದಲ್ಲಿ ಬರೆದಿಲ್ಲವೆಂದು ತಿಳಿದು ಕೆಲವು ದಿವಸ ಅದರ ಸಂಗದ ಮಾತಾಡುವದನ್ನೇ ಬಿಟ್ಟುಬಿಟ್ಟರು.

ನಿರ್ಮಲೆಗೆ ಹದಿನೆಂಟು ತುಂಬಿ ಹತ್ತೊಂಬತ್ತನೇ ವರ್ಷಕ್ಕೆ ಪ್ರಾರಂಭವಾಯಿತು. ಆಗ ಪುನಃ ಕೃಷ್ಣರಾಯರಿಗೆ ಆಸೆಯು ಉತ್ಪನ್ನವಾಯಿತು.

-ಈಗ ವರ್ಷದ ಅವಧಿಯೊಂದು ಕಳೆಯಿತು. ಕಾರಣ, ಲಗ್ನಕ್ಕೆ ಒಪ್ಪುವಳೆಂದು ಆಶೆಯಾಯಿತು.

ಕೃಷ್ಣರಾಯರ ದೇಹಸ್ಥಿತಿಯು ದಿವಸ ದಿವಸಕ್ಕೆ ಕೆಡುತ್ತಾ ಬರುತ್ತಿತ್ತು. ಹೀಗಿದ್ದರೂ ನಿರ್ಮಲೆಯು ತಾನಾಗಿಯೇ ತಂದೆಯನ್ನು ಕಾಣಲು ಹೋಗುತ್ತಿರಲಿಲ್ಲ ಮತ್ತು ಅವಳಿಗೆ ಅನುಕೂಲವೂ ದೊರೆಯುತ್ತಿರಲಿಲ್ಲ. ಮಿತ್ರರ, ಗೆಳತಿಯರ ಸಂಗಡ ಸೇರಿ ಬೇರೆ ವಿಷಯಗಳನ್ನು ತೆಗೆದು ಹರಟೆ ಮಾತಾಡುವುದಕ್ಕೋಸ್ಕರವೇ ಅವಳಿಗೆ ಹೆಚ್ಚು ಕಾಲವು ಹೋಗುತ್ತಿತ್ತು. ಇದಕ್ಕೋಸ್ಕರವೇ ಈ ಕೆಲಸವನ್ನು ಅವಳು ಕೈಕೊಂಡಿದ್ದಳು.

ಕೃಷ್ಣರಾಯರು ಬದುಕುವಹಾಗಿಲ್ಲವೆಂದು ಒಂದು ಪತ್ರ ಬರೆಸಿ ನಿರ್ಮಲೆಯನ್ನು ಕರೆಯಿಸಬೇಕೆಂದು ಆಲೋಚಿಸಿ ಅದರಂತೆ ಒಂದು ಪತ್ರ ಬರೆದರು. ಅದಕ್ಕೆ ಅವಳು ಬರಲೇ ಇಲ್ಲ. ನಂತರ ಎರಡು ಮೂರು ಕಾಗದ ಮೇಲಿಂದ ಮೇಲೆ ಬರೆಯಲು ಆಗ ಬಂದಳು. ಕೃಷ್ಣರಾಯರು ಉಪಾಯದಿಂದ ಲಗ್ನದ ವಿಚಾರವನ್ನು ತೆಗೆದರು. . . .

**ನಿರ್ಮಲೆ:**— ಯಾವಾಗಲೂ ನೀವು ಲಗ್ನದ ಮಾತನ್ನೇ ಆಡುತ್ತೀರಿ, ಲಗ್ನದ ಹೊರತು ಹೆಂಗಸರಿಗೆ ಬೇರೆ ಕೆಲಸವೇ ಇಲ್ಲವೇ? ಲಗ್ನದೊಳಗೇ ಅವರ ಮೋಕ್ಷವಿರುವುದೇ ಹೇಗೆ? ಇದೇ ಪ್ರಕಾರ ಉರಟಾಪರಟಿ ಮಾತನಾಡಿ ಆ ಪ್ರಶ್ನೆಯನ್ನೇ ಹಾರಿಸಿಬಿಟ್ಟಳು.

ಹುಡುಗಿಯು ವ್ಯರ್ಥ ಹಾಳಾದಳೆಂದು ಕೃಷ್ಣರಾಯರು ಮನಸ್ಸಿನಲ್ಲಿ ಬಹಳವಾಗಿ ಚಿಂತೆ ಹಚ್ಚಿಕೊಂಡರು. ಇನ್ನು ಮೇಲೆ ಈ ವಿಚಾರ ಮಾತನಾಡಲಿಕ್ಕಿಲ್ಲವಾಗಿ ಪ್ರತಿಜ್ಞೆ ಮಾಡಿಕೊಂಡರು.

ಒಂದು ಕಡೆ ಮಗಳ ಲಗ್ನವಾಗಲಿಲ್ಲವೆಂಬ ಚಿಂತೆ; ಇನ್ನೊಂದುಕಡೆ ಪ್ರತಿವಾರವೂ ಸನಾತನ ಪತ್ರಿಕೆಯ ಲೇಖನಗಳನ್ನು ಓದುವುದರಿಂದ ಆಕಡೆ ಲಕ್ಷವೂ ಪೂರ್ಣತಿರುಗಿ ಕಮಿಟಿಯಲ್ಲಿ ಸೇರಿದ್ದು ನನ್ನ ಆಯುಷ್ಯದಲ್ಲಿ ದೊಡ್ಡ ತಪ್ಪೆಂದು ತಿಳಿಯಿತು. ಹಿಂದಿನ ಹೊಟ್ಟೆಶೂಲೆಯು ಈಗ ಪುನಹ ಪ್ರಾರಂಭವಾಗಿತ್ತು. ಹೀಗಾಗಿ ಔಷಧೋಪಚಾರದಿಂದ ಅವರ ಜಾಯಿಲೆಯು ಹೋಗುವಂತಿರಲಿಲ್ಲ. ಮನೋವ್ಯಥೆಯಿಂದ ಪ್ರಕೃತಿಯು ದಿನೇ ದಿನೇ ಕ್ಷೀಣವಾಗುತ್ತ ಸ್ವಲ್ಪದಿವಸದಲ್ಲೇ ಹಾಸಿಗೆಯನ್ನು ಹಿಡಿದರು.

ನನ್ನ ಈ ಅವಸ್ಥೆಯನ್ನು ನೋಡಿಯಾದರೂ ನನ್ನ ಮೇಲೆ ದಯಹುಟ್ಟಿ ಲಗ್ನವಾದಾಳು, ಎಂಬ ಆಶೆಯು ಪುನಹ ಕೃಷ್ಣರಾಯರಿಗೆ ಪ್ರಾರಂಭವಾಯಿತು. ಅವಳು ಪತ್ರಬರೆದರೆ ಬರಲಾರಳು. ಮನುಷ್ಯನನ್ನು ಕಳಿಸಿದರೂ ಬರುವನಂಬಿಕೆಯಿಲ್ಲವಾದ್ದರಿಂದ ತಂತೀಬಿಡಬೇಕೆಂದು ನಿಶ್ಚಯಿಸಿ "ಅಂತ್ಯಾವಸ್ಥೆ, ಮುಖನೋಡುವದಿದ್ದರೆ ಕೂಡಲೆ ಬರಬೇಕು." ಎಂದು ತಂತೀ ಬಿಟ್ಟರು

ಕೃಷ್ಣರಾಯರು ತಾವೇ ಚತುರರೆಂದು ತಿಳಿದಿದ್ದರು. ಆದರೆ ನಿರ್ಮಲೆಯು ಅವರ ಮಗಳಲ್ಲವೇ? ತಾರು (ತಂತಿ) ನೋಡಿದೊಡನೆ ಲಗ್ನದ ವಿಷಯಕ್ಕೆ ಹೀಗೆ ಮಾಡಿರಬಹುದೆಂದು ಅವಳು ತಿಳಿದುಕೊಂಡಳು. ಅವರೂ ನಿಜವಾಗಿ ತಂದೆಯವರು ಖಾಯಿಲೆ ಇರಬಹುದೆಂದು ಊರಿಗೆ ಹೋರಡುವವಳಿದ್ದಳು. ಆದರೆ ಅದೇ ದಿವಸ ಕಮಿಟಿಯ ಹುಟ್ಟಿದ ಹಬ್ಬದ ಆನಂದಕ್ಕೆ ಪ್ರೀತಿಯ ಪಂಕ್ತಿಭೋಜನ! ಕಾರಣ ತಂತಿಯನ್ನು ಹಾಗೇ ಇಡಬೇಕಾಗಿ ಬಂತು. ಈ ಸಮಯವು ವರ್ಷಕ್ಕೊಮ್ಮೆ ಬರುವದು. ಮತ್ತು ಈ ಪ್ರೀತಿ ಭೋಜನಕ್ಕೆ ಎಲ್ಲ ಸಭಾಜನರು ಸೇರುತ್ತಿದ್ದು ಅದಕ್ಕೆ ಕಮಿಟಿಯಲ್ಲಿ ಬಹಳ ಮಹತ್ವವೂ ಇದ್ದುದರಿಂದ ಆಕೆ ನಿಂತುದು ಆಶ್ಚರ್ಯವಲ್ಲ.

ತಂತಿ ಕಳಿಸಿದರೂ ನಿರ್ಮಲೆಯು ಬಾರದ್ದರಿಂದ ಕೃಷ್ಣರಾಯರಿಗೆ ಆಕೆಯ ಮೇಲಿನ ಆಶೆಯು (ಪ್ರೇಮವು) ಇಲ್ಲದಂತಾಯಿತು. ಮತ್ತು ಅವಳ ವಿಚಾರದಲ್ಲಿ ತುಂಬಾ ಸಿಟ್ಟುಬಂತು. ಹುಡುಗಿಯ ಲಗ್ನ ಎಂದಾಗುವುದೋ ಎಂಬ ಹಂಬಲಿಕೆಯಿಂದ ತನ್ನ ಹೆಂಡತಿಯು ಹೇಗೆ ಸತ್ತಳೋ ಅದರಂತೆ ತನ್ನಗತಿಯೂ ಆಗುವುದೆಂದು ಕೃಷ್ಣರಾಯರ ಮನಸ್ಸಿಗೆ ಚಿಂತೆಹತ್ತಿತು.

ತನ್ನ ಅವಸಾನ ಕಾಲವು ಕೇವಲ ಇನ್ನು ಎರಡು ಮೂರು ದಿವಸದಲ್ಲಿಯೇ ಮುಗಿಯುವುದೆಂದು ತಿಳಿದು ಏನಾದರೂ ಪ್ರಯತ್ನ ಮಾಡಿ ಲಗ್ನವಾಗಲು ಮಗಳಿಗೆ ತಿಳಿವಳಿಕೆ ಹೇಳಿಸೋಣವೆಂದು ಸನಾತನ ಪತ್ರಿಕಾಕರ್ತರಿಗೆ ಹೇಳಿ ಕಳಿಸಿದರು. ಇವರು ಕೇವಲ ಬುದ್ಧಿವಂತರೂ ವ್ಯವಹಾರ ಚತುರರೂ ಪರೋಪಕಾರಿಗಳೂ ಆಗಿದ್ದರು. ಮತ್ತು ಹಿಂದೆ ಒಂದುಸಾರೆ ಈ ವಿಚಾರ ತಿಳಿಸಿದಾಗ ಇದು ಸ್ತ್ರೀ ಶಿಕ್ಷಣದ ನೈಜವಾದ ಫಲದೊರೆಯದ್ದರ ಫಲವೆಂದು

ತಿಳಿಸಿದ್ದರು. ಈಗಲೂ ಅದೇ ವಿಚಾರವನ್ನು ಹೇಳಲಾರಂಭಿಸಿದರು. ಸಧ್ಯದ ಸ್ತ್ರೀ ಶಿಕ್ಷಣದಲ್ಲಿ ಆರ್ಯರ ಪೂರ್ವಪರಂಪರೆಯೂ ಅವರ ಆಚಾರ ವಿಚಾರ ಮತ್ತು ಧರ್ಮ ಈ ವಿಚಾರಗಳೂ ಇಲ್ಲದ್ದರಿಂದ ಅವರು ಶಾಲೆಯಲ್ಲಿರುವಾಗ ಈ ವಿಚಾರಗಳು ಅವರಿಗೆ ತಿಳಿಯುವದಿಲ್ಲ. ಆದರೆ ಇದಕ್ಕೆ ಪ್ರತಿಯಾಗಿ ಆರ್ಯರ ವಿರುದ್ಧವಾದ ಪಾಶ್ಚಾತ್ಯರ ಪದ್ಧತಿಗಳ ಜ್ಞಾನವಾಗುತ್ತದೆ. ಮತ್ತು ಅವರ ಕೋಮಲ ಮನಸ್ಸಿನ ಮೇಲೆ ಪಾಶ್ಚಾತ್ಯರ ಆಚಾರ ವಿಚಾರಗಳು ಅವರಿಗೆ ಒಪ್ಪುವವು. ಆದ್ದರಿಂದ ಅದರ ಅನುಕರಣವನ್ನು ಅವರು ಮಾಡುವರು. ಯಾವ ಮನುಷ್ಯನಿಗೇ ಆಗಲಿ ಕೆಟ್ಟ ಚಟಗಳು ಬೇಗನೇ ಅಂಟಿಕೊಳ್ಳುವವು. ಅವರಲ್ಲಿಯೂ ಚಿಕ್ಕಂದಿನಲ್ಲಿ ಅದರ ಸಾಧಕ ಬಾಧಕ ವಿಚಾರಿಸದೆ ಒಬ್ಬರನ್ನು ನೋಡಿ ಮತ್ತೊಬ್ಬರು ಅನುಕರಣ ಮಾಡುತ್ತಾರೆ ಅದರಂತೆ ನಿರ್ಮಲೆಗೆ ಸಿಕ್ಕ ಏಕದೇಶೀಯ ಶಿಕ್ಷಣದಿಂದ ಆಕೆಯ ಮನಸ್ಸು ಈ ಪದ್ಧತಿಗಳಲ್ಲಿ ನೆಲೆಯಾಗಿ ಹೋಗಿತ್ತು. ಇದಕ್ಕೆ ಒಂದೇ ಒಂದು ಉಪಾಯವಿದೆ. ಅವಳಿಗೆ, “ಪ್ರತಿ ಮಾಹೆಯಲ್ಲೂ ದೊರೆಯುವ ಹಣಕ್ಕೆ ಕೊರತೆಯನ್ನುಂಟುಮಾಡುವುದು.' ಸುಧಾರಣೆಯ ಪ್ರತಿಯೊಂದು ಕೆಲಸಕ್ಕೂ ಹಣವೇ ಪ್ರಧಾನವು. ಹಣವಿಲ್ಲದಿದ್ದರೆ ಆ ಆಡಂಬರಗಳೆಲ್ಲ ತಾವೇ ನಿಲ್ಲುವವು. ಇದರ ಅನುಭವವೂ ನಿಮಗಿದೆ. ಕಾರಣ ಲಗ್ನವಾದರೆ ಮಾತ್ರ ಈ ಎಲ್ಲ ಆಸ್ತಿ ದೊರೆಯುವಂತೆ ವಿಲ್ಲಿನಲ್ಲಿ ಶರ್ತು ಬರೆದರಾಯಿತು. ಇದೇ ನನ್ನ ಅಭಿಪ್ರಾಯ. ದುಡ್ಡಿನಿಂದ ಬೇಕಾದ ಅನುಕರಣವನ್ನು ಮಾಡಬಹುದು. ನಮ್ಮ ಹಿಂದಿನವರ ನಮೂನೆಯನ್ನೂ, ಈಗಿನ ಪದವೀಧರರ ಇರುವಿಕೆಯನ್ನೂ ನೋಡಿದರೆ ಈ ವಿಚಾರ ಗೊತ್ತಾಗುವದು. ಈ ಪ್ರಕಾರದ ಶರ್ತು ಹಾಕಿದರೆ ಶರ್ತಿಗೋಸ್ಕರವಾಗಿಯಾದರೂ ಲಗ್ನವಾಗುತ್ತಾಳೆ. ಮತ್ತು ಅವಳ ಮನಸ್ಸಿನಂತೆ ನಡೆಯುವ ಪತಿಸಿಕ್ಕರೆ ಅವಳಿಗೆ ತುಂಬಾ ಅನುಕೂಲ ಸಂಭವಿಸುವದು. ಒಂದು ವೇಳೆ ಲಗ್ನವಾಗಲೇ ಬಾರದೆಂದು ನಿಶ್ಚಯಿಸಿದರೆ ಅದು ಬಹಳ ದಿವಸ ನಿಲ್ಲಲಾರದು. ಯಾಕಂದರೆ ತರುಣತನದಲ್ಲಿ ಇಂಥ ವಿಚಾರ ಬರುವದು ಸಹಜ. ಆದರೆ ಯೋಗ್ಯಪತಿಯ ಸಹವಾಸದಿಂದ ಅದು ಕೊನೆಗೆ ದೂರಾಗುವದು. ಆದ್ದರಿಂದ ಮೃತ್ಯುಪತ್ರದಲ್ಲಿ (will) ಆ ರೀತಿ ಶರ್ತುಬರೆದಿಡಬೇಕು.

ಸನಾತನ ಪತ್ರಿಕಾಕರ್ತರ ಅಭಿಪ್ರಾಯವು ಕೃಷ್ಣರಾಯರಿಗೆ ಯೋಗ್ಯವಾಗಿ ಕಂಡಿತು. ಕಾರಣ ಕೂಡಲೆ ಮೃತ್ಯುಪತ್ರ ಬರೆಯುವ ಅನುಕೂಲ ಪಡಿಸಿದರು. ಮತ್ತು ಪತ್ರ ಬರೆಯಲು ಭಾವಂದಿರಾದ ಡಾಕ್ಟರ ವಿಶ್ವಾಸರಾಯರಿಗೂ ಪ್ರಸಿದ್ಧ ವಕೀಲ ಸುಬ್ರಾಯನ್‌ರಿಗೂ ಹೇಳಿ ಕಳಿಯಿಸಿದರು. ಸನಾತನ ಪತ್ರಿಕಾಕರ್ತರ ಆಲೋಚನೆಯು ವಕೀಲರಿಗೆ ಯೋಗ್ಯಕಂಡಿತು. ಎಲ್ಲರೂ ಸೇರಿ ಸ್ವಲ್ಪ ಆಲೋಚಿಸಿ, ಸ್ವಲ್ಪ ಹೆಚ್ಚುಕಡಿಮೆಮಾಡಿ, ಪತ್ರವನ್ನು ವಕೀಲರಿಂದ ಬರೆಸಿದರು. ಮತ್ತು ಪೂರ್ಣ ಜ್ಞಾನವಿರುವಾಗಲೇ ಕೃಷ್ಣರಾಯರು ರುಜು ಮಾಡಿದರು. ಪತ್ರದಲ್ಲಿ ಅನಾಥ ಬಾಲಿಕೆಯರ ಲಗ್ನಕ್ಕಾಗಿ ರಾಧಾಬಾಯಿಯ ಹೆಸರಿನಿಂದ ಸಹಾಯ ಮಾಡಲು ಒಂದು ಸಾವಿರ ರೂಪಾಯಿಯನ್ನು ಮಾತ್ರ ಬಿಟ್ಟು ಉಳಿದ ಎಲ್ಲ ಆಸ್ತಿಯನ್ನು ನಿರ್ಮಲೆಗೋಸ್ಕರ ಇಡಲ್ಪಟ್ಟಿತ್ತು. ನಿರ್ಮಲೆಗೆ ಆಸ್ತಿ ಸಿಗುವುದಕ್ಕೆ ಒಂದು ಶರ್ತ ಮಾತ್ರ ಬರೆದಿತ್ತು. ಅದೇನಂದರೆ- ನಿರ್ಮಲೆಯು ಲಗ್ನವಾಗುವವರೆಗೆ ಆಕೆಗೆ ವರ್ಷಕ್ಕೆ ಮೂರುನೂರು ರೂಪಾಯಿ ಖರ್ಚಿಗೆ ಕೊಡಬೇಕು ಲಗ್ನವಾದ ನಂತರ ಎಲ್ಲ ಆಸ್ತಿಯೂ ಅವಳದೇ ಒಂದುವೇಳೆ ಲಗ್ನವಾಗದಿದ್ದರೆ ಆಕೆಯ ಪಾಶ್ಚಾತ್ ಕಮಾಟಿಯ ಸಂಬಂಧವಾಗಿ ಸನಾತನ ಪತ್ರಿಕೆಯಲ್ಲಿ ಹೊರಟ ಲೇಖಗಳನ್ನು ಮುದ್ರಿಸಿ (ಅಚ್ಚುಹಾಕಿಸಿ) ಎಲ್ಲ ಜನರಿಗೂ ಧರ್ಮಾರ್ಥವಾಗಿ ಹಂಚಲು ಈ ಹಣವನ್ನು ಉಪಯೋಗಿಸಬೇಕು ಎಂದು ಬರೆದಿತ್ತು.

ಸುಬ್ರಾಯನ್ ವಕೀಲರೂ ವಿಶ್ವಾಸರಾಯರೂ ಸನಾತನ ಪತ್ರಿಕಾಕರ್ತರೂ ಈ ಆಸ್ತಿಯ ಪಂಚರನ್ನಾಗಿ ಮಾಡಿ ಪತ್ರದಲ್ಲಿ ಬರೆದಿದ್ದರು. ಪತ್ರ ಬರೆದನಂತರ ನಿರ್ಮಲೆಗೆ ಪುನಃ ತಂತಿ ಬಿಟ್ಟರು. ಈಗಲೂ ಆಕೆಗೆ ನಿಯಮದಂತೆ ಕಾಲಕ್ಕೆ ಸರಿಯಾಗಿ ಬರಲು ಆಗಲಿಲ್ಲ. ಎರಡನೇ ದಿವಸ ಅವಳು ಬರುವುದರೊಳಗೆ ಕೃಷ್ಣರಾಯರು ನಿರ್ಮಲೇ! ನಿರ್ಮಲೇ! ಎಂದು ಅನ್ನುತ್ತ ಪ್ರಾಣಬಿಟ್ಟಿದ್ದರು.

ಹಿಂದೆ ತಾಯಿಯ ಕೊನೆಭೇಟಿಯು ಹೇಗೆ ಆಗಲಿಲ್ಲವೋ ಹಾಗೆಯೇ ತಂದೆಯ ಭೇಟಿಯೂ ಆಕೆಗೆ ಲಭಿಸಲಿಲ್ಲ.

---

# ೪ನೆಯ ಪರಿಚ್ಛೇದ.



## ವೆಂಕಟರಾಯರು ಮತ್ತು ನಿರ್ಮಲೆ.

ಮೂರನೆಯ ಪರಿಚ್ಛೇದದಲ್ಲಿ ಹೇಳಿದಂತೆ ನಿರ್ಮಲೆಯು ಡಾಕ್ಟರರ ಮನೆಯಿಂದ ತಿರುಗಿ ಬರುವುದರೊಳಗೆ ಸಬ್ಜ್ಯನ್‌ರ ಗುಮಾಸ್ತರಾದ ವೆಂಕಟರಾಯರು ಕೃಷ್ಣರಾಯರ ಮೃತ್ಯುಪತ್ರದ ಕಾಗದವನ್ನು ತೆಗೆದುಕೊಂಡು ಬಂದು, ಆಶ್ರಮದ ಬಾಗಿಲಲ್ಲಿ ಕುಳಿತಿದ್ದರು. ನಿರ್ಮಲೆಯನ್ನು ನೋಡಿದೊಡನೆ ಆಕೆಯ ಸುಂದರತನಕ್ಕೆ ಅವರಿಗೆ ತುಂಬಾ ಆಶ್ಚರ್ಯವಾಯಿತು. ಮತ್ತೆ ಇಷ್ಟು ಸೌಂದರ್ಯವುಳ್ಳ ಹುಡುಗಿಯರನ್ನು ಅವರು ಇದುವರೆಗೂ ನೋಡಿರಲಿಲ್ಲ. ಆದರೆ ಆಗ ಅವಳ ಉಡುಪುಗಳು ಸಾಧಾರಣವಿದ್ದುವು. ಉತ್ತಮವಾದ ವಸ್ತ್ರಗಳನ್ನು ಧರಿಸಿದ್ದರೆ ವೆಂಕಟರಾಯರ ಸ್ಥಿತಿಯು ಇನ್ನೂ ಹೇಗಾಗುತ್ತಿತ್ತೋ! ಆದರೂ ವೆಂಕಟರಾಯರು ಒಂದೇ ದೃಷ್ಟಿಯಿಂದ ಆಕೆಯ ತೇಜಸ್ವಿ ಮುಖವನ್ನೂ, ಶುಭ್ರವಾದ ಹಲ್ಲುಗಳನ್ನೂ ಒಂದುಸಾರಿ ನೋಡುವರು. ಇನ್ನೊಂದುಸಾರಿ ಸರಳವಾದ ನಾಸಿಕವನ್ನೂ, ನೀಳವಾದ ದೇಹವನ್ನೂ ನೋಡುವರು. ಯಾವಕಡೆ ನೋಡುವುದು! ಯಾವಕಡೆ ಬಿಡುವುದು! ಎಂಬುವುದು ತೋಚದೆ ತಮ್ಮ ಕೆಲಸವನ್ನು ಸಹ ಮರೆತು, ಹುಚ್ಚರಾಗಿ ಕೂತುಬಿಟ್ಟರು. ಸ್ತ್ರೀರೂಪು ಯಾವಕಡೆಯಿಂದ ನೋಡಿದರೂ ಪುರುಷರಿಗೆ ಚಂದವಾಗಿಯೇ ಇರುವುದು ನಿಜವಲ್ಲವೆ?

ನಿರ್ಮಲೆಗೂ ತನ್ನ ಸೌಂದರ್ಯದಲ್ಲಿ ತುಂಬಾ ಅಭಿಮಾನವಿತ್ತು. ಜನರು ತನ್ನನ್ನು ಆಶ್ಚರ್ಯದಿಂದ ನೋಡಿದರೆ ತುಂಬಾ ಹೆಮ್ಮೆಯಿಂದ ಆನಂದಪಡುತ್ತಿದ್ದಳು. ಎದುರಿಗಿರುವ ಮನುಷ್ಯನು ತನ್ನನ್ನು ನೋಡುವುದರಲ್ಲಿ ಮಗ್ನನಾಗಿರುವನೆಂದು ಅವಳಿಗೆ ಚನ್ನಾಗಿ ತಿಳಿದಿತ್ತು. ಇಂಥ ಸಮಯದಲ್ಲಿ ಅವಳಿಗೆ ತನ್ನ ಸೌಂದರ್ಯಕ್ಕೋಸ್ಕರ ಹೆಮ್ಮೆಯೂ ಉಂಟಾಗುತ್ತಿತ್ತು.

ಕೈಯಲ್ಲಿ ಹಿಡಿದ ಒಂದು ಕಾಗದದ ಸುರುಳಿಯನ್ನು ನೋಡಿ ಇವರು ಸುಬ್ರಾಯನ್ ವಕೀಲರ ಮನೆಯವರಿರಬಹುದೆಂದು ನಿರ್ಮಲೆಯು ತರ್ಕ ಮಾಡಿದಳು. ಮನಸ್ಸಿನೊಳಗೆ ನಕ್ಕು ವೆಂಕಟರಾಯರ ಕಡೆ ನೋಡಿ, ವಕೀಲರು ಕಾಗದಗಳನ್ನು ಕಳಿಸಿರುವರೇನು? ನೀವು ನನಗೋಸ್ಕರ ಬಹಳ ಹೊತ್ತು ಇಲ್ಲಿ ಕಾದಿರಬೇಕಾಯಿತೇ? ಕಾಗದವನ್ನು ಆಶ್ರಮದ ಮಾಲಕರ ಹತ್ತಿರ ಕೊಟ್ಟು ಹೋಗಬಹುದಾಗುತ್ತಿಲ್ಲ! ಎಂದು ಹೇಳಿದಳು.

ವೆಂಕಟರಾಯರು ಕಾಗದದ ಸುರಳಿಯನ್ನು ಮುಂದೆ ಹಿಡಿದು ನಿಮ್ಮ ಚೀಟಿ ಬಂದಾಗ ಆಫೀಸಿನಲ್ಲಿ ಬಹಳ ಕೆಲಸವಿತ್ತು. ಚೀಟಿಯಲ್ಲಿ ಜರೂರಿ ಬಹಳವಿರುವಂತೆ ತೋರಿದ್ದರಿಂದಲೂ ನಕಲು ಪೂರ್ತಿ ತಯಾರಾಗದ್ದರಿಂದಲೂ ಅಸಲು ಪತ್ರಗಳನ್ನೇ ತಮಗೆ ತೋರಿಸಿ ಹಾಗೇ ವಾಪಸು ಒಯ್ಯಬೇಕೆಂದು ನಾನು ಬಂದೆನು. ಕಾರಣ ಅವನ್ನು ಬೇರೆಯವರ ಸಂಗಡ ಕೊಡಲಿಲ್ಲ.

**ನಿರ್ಮಲೆ:**-- (ಸ್ವಲ್ಪ ಸಿಟ್ಟಿನಿಂದ) ಯಾರಿಗೆ ಅವಸರ? ವಕೀಲರ ಕಡೆ ಒಂದು ಸಾರೆ ಒಂದು ಕೆಲಸ ಕೊಟ್ಟರೆ ಅದು ಮುಗಿಯುವಂತೆಯೇ ಇಲ್ಲ. ಚತುರ್ಗಡಿ ಬರೆದಿಲ್ಲ, ಕಾಗದ ಸಿಲುಕಿಲ್ಲ. ವಗೈರೆ ಯಾವಾಗಲೂ ಸಬಬು. ಅವರು ವಕೀಲರಲ್ಲವೆ? ಈಗಲೇ ಕಾಗದವನ್ನು ತೆಗೆದುಕೊಂಡು ಹೋಗದಿದ್ದರೆ ಆಗುವ ಹಾಗೆ ಇಲ್ಲವೋ?

**ವೆಂಕಟರಾವ್** :— ನಾನು ತಾಬೇದಾರನು. ಧನಿಯ ಹೇಳಿಕೆಯಂತೆ ನಡೆಯಬೇಕು, ನನ್ನ ಅಧಿಕಾರದಲ್ಲಿ ಕಾಗದವನ್ನು ಇಲ್ಲಿ ಬಿಟ್ಟು ಹೋಗಲು ಬರುವಂತಿಲ್ಲ.

(ನಿರ್ಮಲೆ ಒಂದಾವರ್ತಿ ಓರೆನೋಟದಿಂದ ವೆಂಕಟರಾಯರನ್ನು ನೋಡಿದಳು ಮತ್ತು ಇದನ್ನು ನೋಡಿದ ವೆಂಕಟರಾಯರು ಇವಳು ಒಳ್ಳೇ ಹುಷಾರ ಮತ್ತು ಚಾಣಾಕ್ಷಳಿರಬಹುದೆಂದು ತಿಳಿದರು.)

**ನಿರ್ಮಲೆ** :— (ಕಾಗದದ ಸುರಳಿಯನ್ನು ಬಿಚ್ಚುತ್ತ) ನಿಮ್ಮ ಹೆಸರೇನು?

**ವೆಂಕಟರಾವ್** :— ನನ್ನ ಹೆಸರು ವೆಂಕಟರಾವ್.

**ನಿರ್ಮಲೆ** :— ಕೂತುಕೊಳ್ಳಿರಿ, ಆ ಖುರ್ಚಿಯ ಮೇಲೆ. ಈಗಲೇ ನೋಡಿ ನಿಮ್ಮ ಕಾಗದ ವಾಪಸು ಕೊಡುತ್ತೇನೆ. ( ಕಾಗದವನ್ನು ಬಿಚ್ಚಿ ಓದಲು ಪ್ರಾರಂಭಿಸಿದಳು. )

ವೆಂಕಟರಾಯರು ಸಮೀಪದ ಖುರ್ಚಿಯ ಮೇಲೆ ಕೂತುಕೊಂಡು ನಿರ್ಮಲೆಯ ಕಡೆಗೆ ಒಂದೇಸವನೆ ನೋಡುತ್ತಿದ್ದರು. ಅವಳು ಕಾಗದವನ್ನು ಒಂದಾದಮೇಲೆ ಮತ್ತೊಂದರಂತೆ ಹಾಳೆತಿರುವುತ್ತ ಎಲ್ಲ ಹಾಳೆಗಳನ್ನೂ ಒದಿದಳು. ಓದುವಾಗ ನಡುನಡುವೆ ಕಾಯಿದೆಯ ಒಂದೆರಡು ಪ್ರಶ್ನೆಗಳನ್ನೂ ಕೇಳಿದಳು.

ಈ ಪತ್ರದ ನಕಲನ್ನು ವೆಂಕಟರಾಯರೇ ಮಾಡಿದ್ದರು. ಮತ್ತು ಅದ ರಲ್ಲಿರುವ ಶರ್ತುಗಳನ್ನು ತಿಳಿದುಕೊಂಡಿದ್ದರು. ಒಮ್ಮೆ ಈ ಶರ್ತಿನ ಸಂಬಂಧ ಚರ್ಚೆಗಳೂ ನಡೆದಿದ್ದವು.

ವೆಂಕಟರಾಯರಿಗೆ ಈಚೆಗೆ ಪ್ರಾಣದ ಮೇಲೆ ಆಶೆಯೇ ಇರಲಿಲ್ಲ. ಈ ದಿನ ನಿರ್ಮಲೆಯನ್ನು ನೋಡಿದ್ದರಿಂದ ಅವರ ಮನಸ್ಸಿಗೆ ಆನಂದವಾಗಿ, ಮುಖವು ಸ್ವಲ್ಪ ಗಂಭೀರವಾಗಿ ಕಾಣುತ್ತಿತ್ತು. ಮತ್ತು ಇಂಥಾ ಉಚ್ಚ (ಹೆಚ್ಚಿನ) ಶಿಕ್ಷಣಪಡೆದ ಸುಂದರ ಬಾಲಕಿಯ ಸ್ವಲ್ಪ ಹೊತ್ತಿನ ಮಾತಾಡುವಿ ಕೆಯು ದೊರೆತದ್ದು ವೆಂಕಟರಾಯರಿಗೆ ಇದೇ ಮೊದಲನೆಯಸಾರೆ. ಕಾರಣ ಆಕೆಯ ರೂಪವನ್ನು ನೋಡಿ ಅವರು ಬೆರಗಾಗಿ ಬಿಟ್ಟರು.

ವೆಂಕಟರಾಯರು ಆಶ್ರಮಕ್ಕೆ ಬರುವಮೊದಲೇ ಮೃತ್ಯುಪತ್ರದಲ್ಲಿರುವ ಆಸ್ತಿಯು ಎಷ್ಟು ದೊಡ್ಡದಿರುವದೆಂಬ ಬಗ್ಗೆ ಮನಸ್ಸಿನಲ್ಲೇ ವಿಚಾರ ಮಾಡುತ್ತಾ ಇದ್ದರು! ಪತ್ರದಲ್ಲಿ ನಿರ್ಮಲೆಯ ವಯಸ್ಸು ಎಷ್ಟೆಂಬದನ್ನು ಬರೆದಿತ್ತು. ಮತ್ತು ಅದರೊಳಗಿರುವ ಶರ್ತಿನ ಪ್ರಕಾರ ಸಧ್ಯ ಅವಳ ಲಗ್ನ ವಾಗುವುದಿತ್ತು. ಈ ವಿಚಾರಗಳನ್ನೆಲ್ಲಾ ಇವರ ಸಹಪಾಠಿಗಳು ಆಲೋಚಿಸಿ ವೆಂಕಟರಾಯರು ಹೊರಟೊಡನೆ ಸುದಾಮರಾಯರೇ ಏನು ? ಏನೋ ಗಹನವಿಚಾರ ಮಾಡುತ್ತೀರಲ್ಲ ? ಎಂದು ತಮಾಶೆ ಮಾಡಿದ್ದರು. ಅವರು ಮಾಡಿದ ಚೇಷ್ಟೆಯ ಮಾತುಗಳು ನಿರ್ಮಲೆಯನ್ನು ನೋಡಿದೊಡನೆ ನಿಜ ವೆಂದು ತೋರಿದವು.

ವೆಂಕಟರಾಯರು ಅವಳ ಕಪ್ಪಾದ ಕೂದಲನ್ನೂ ಸುಂದರವಾದ ಮುಖವನ್ನೂ ತಿದ್ದಿಟ್ಟಂತೆ ಇರುವ ತುಟಿ ಮತ್ತು ಕೊರಳನ್ನೂ ಎವೆ ಇಕ್ಕದೆ ನೋಡುತ್ತಾ ಇದ್ದರು. ಅವಳ ಮುಖದ ಮೇಲೆ ಕಾರ್ಯತತ್ಪರತೆಯು ಮತ್ತು ಅಹಂಭಾವದ ಚಿನ್ಹಗಳು ತೋರುತ್ತಿದ್ದವು. ರೂಪು, ಐಶ್ವರ್ಯ, ವಿದ್ಯೆ ಎಲ್ಲವೂ ವೆಂಕಟರಾಯರಿಗೆ ಮೆಚ್ಚಿಗೆಯಾದವು. ಇವಳಷ್ಟೇ ವಯಸ್ಸಿ ನವರು ಅತ್ತೆಮನೆಯಲ್ಲಿರುವಾಗ ಇವಳು ಮಾತ್ರ ಲಗ್ನವಾಗದಿರುವುದನ್ನು ನೋಡಿ ಅವರಿಗೆ ಸ್ವಲ್ಪ ಅಸಮಾಧಾನವಾಯಿತು.

ಅಲ್ಲಿದ್ದ ಸಾಮಾನುಗಳನ್ನೂ, ಅವುಗಳ ವ್ಯವಸ್ಥೆಯನ್ನೂ, ಅವಳ ನಡಿಗೆ, ಮಾತಾಡುವಿಕೆ ಮತ್ತು ಸೊಬಗನ್ನೂ ನೋಡಿ ಇವಳು ಒಳ್ಳೇ ಷೋಕಿಯುವ ತಿರಬಹುದೆಂದು ವೆಂಕಟರಾಯರಿಗೆ ತೋರಿತು. ಈ ಕಾರಣಗಳಿಂದಲೇ ಪತ್ರದಲ್ಲಿ ಆ ರೀತಿ ಶರ್ತುಬರೆದಿರಬಹುದೇ ? ಎಂಬ ಆಲೋಚನೆ ಮಾ ಡುತ್ತಾ ಇರುವಷ್ಟರಲ್ಲಿ ನಿರ್ಮಲೆಯು ತನ್ನ ಕೈಯಲ್ಲಿದ್ದ ಕಾಗದವನ್ನು ಮೇಜಿ ನಮೇಲಿಟ್ಟು ವೆಂಕಟರಾಯರ ಕಡೆಗೆ ನೋಡಿದಳು.

ತಾನು ಒಂದೇಸವನೆ ಆಕೆಯನ್ನು ನೋಡುತ್ತಿರುವುದು ನಿರ್ಮಲೆಗೆ ತಿಳಿದಿದ್ದರಿಂದ ಅವರಿಗೇ ಸ್ವಲ್ಪ ನಾಚಿಕೆಯಾಗಿ ಬೇರೆ ಕಡೆಗೆ ನೋಡಲಾರಂ ಭಿಸಿದರು. ಇದನ್ನು ನೋಡಿ ನಿರ್ಮಲೆಗೆ ನಗು ಬಂತು. ಅವಳು ಬಹಳ ಚತುರಳೂ ತನ್ನ ಸೌಂದರ್ಯದ ಸಲುವಾಗಿ ಬಹಳ ಹೆಮ್ಮೆ ಪಡುವವಳೂ ಆಗಿದ್ದಳು. ಯಾರಾದರೂ ಅವಳ ಗುಣಗಾನ ಮಾಡಿದರೆ ಬಹಳ ಮೆಚ್ಚು ವಳು. ನಿರ್ಮಲೆಯ ನಗುವಿಕೆಯನ್ನು ನೋಡಿ, ವೆಂಕಟರಾಯರು (ಸ್ವಲ್ಪ ನಾಚಿಕೆಯಿಂದ) "ನನ್ನ ಕಡೆಯಿಂದ ಏನಾದರೂ ಅವಿನಯ ಮಾತು ಗಳು ಬಂದವೇ" ?

**ನಿರ್ಮಲೆ:—** "ಛೀ ! ಅಂಥದೇನೂ ಇಲ್ಲ" ವೆಂದು ನಗುತ್ತಾ ಹೇಳಿ ದಳು. ವಕೀಲರು ಪತ್ರವನ್ನು ಬೇಗನೆ ತರಹೇಳಿದ್ದರಿಂದ ಅವಸರದಲ್ಲಿ ಪೂರ್ತಿ ಓದಲು ಆಗಲಿಲ್ಲವೆಂದು ಹೇಳಿ, ಪತ್ರವನ್ನು ವೆಂಕಟರಾಯರ ಕೈಯಲ್ಲಿ ಕೊಟ್ಟಳು.

**ವೆಂಕಟರಾವ್:**— ನಾಳೆಗೆ ನಕಲು ತಯಾರಾಗಬಹುದು. ಮತ್ತು ತಯಾರಿಸುವ ಕೆಲಸವೂ ನನ್ನದೇ ಇರುವುದು.

**ನಿರ್ಮಲೆ:**— ನಿಮ್ಮ ಕಡೆಗೆ! ಏನು? ನೀವು ವಕೀಲರ ಗುಮಾಸ್ತರೇನು? (ಆಕೆಗೆ ಆಶ್ಚರ್ಯವಾಯ್ತು. ಅವಳು ಒಂದೆರಡು ಕಾಯಿದೆ ಪ್ರಶ್ನೆ ಕೇಳಿದಾಗ ವೆಂಕಟರಾಯರು ಅದರ ಸವಿಸ್ತಾರ ಮಾಹಿತಿ ತಿಳಿಸಿದ್ದರಿಂದ ಇವರೂ ವಕೀಲರಿರಬಹುದೆಂದು ನಿರ್ಮಲೆಯು ತಿಳಿದಿದ್ದಳು. )

**ವೆಂಕಟರಾವ್:** — ಹೌದು; ನಾನು ಗುಮಾಸ್ತನು. ಆದರೆ ಉಳಿದ ವಿಚಾರದಲ್ಲಿ ವಕೀಲನೇ! | ವೆಂಕಟರಾಯರಿಗೆ ವಕೀಲನೇ ಎಂದು ಹೇಳ ಬೇಕಾದರೆ ಅತ್ಯಂತದುಃಖವಾಯ್ತು. ಅಲ್ಲದೆ ಮುಖವು ಇಳಿದು ಹೋಯಿತು.)

ನಿರ್ಮಲೆಯು ವೆಂಕಟರಾಯರ ಮುಖದ ಮೇಲಿನ ಬದಲಾವಣೆಯನ್ನು ನೋಡಿ ಆಶ್ಚರ್ಯಪಟ್ಟಳು; ಮತ್ತು ಅವರ ಮುಖದ ಕಡೆ ಕೆಲ ಹೊತ್ತು ನೋಡಿ.

**ನಿರ್ಮಲೆ:**— ಸುಬ್ಬ್ರಾಯರು ಈ ಕೆಲಸವನ್ನು ನಿಮ್ಮ ವಶಕ್ಕೆ ವಹಿಸಿರುವಂತೆ ತೋರುತ್ತೆ ಅಲ್ಲವೇ?

**ವೆಂಕಟರಾವ್:**— ಕಾಗದಪತ್ರಗಳನ್ನು ತಂದು ಮುಟ್ಟಿಸುವ ಕೆಲಸವನ್ನು ನನಗೆ ವಹಿಸಿರುತ್ತಾರೆ. ( ಈ ಶಬ್ದಗಳು ಕೇವಲ ಕಷ್ಟದಿಂದ ಹೊರಟವು. ಕುತ್ತಿಗೆಯು ಬಿಗಿದು ಹೋದಂತಾಗಿತ್ತು. )

ನಿರ್ಮಲೆಗೆ ಇದನ್ನು ನೋಡಿದಾಗ ಇನ್ನೂ ಆಶ್ಚರ್ಯದಿಂದ ಆಲೋಚನೆ ಮಾಡಲಾರಂಭಿಸಿದಳು.

**ವೆಂಕಟರಾವ್:**— ನೀವು ಆಶ್ಚರ್ಯಪಡುವ ಅಗತ್ಯವೇ ಇಲ್ಲ. ನನ್ನ ಆಯುಷ್ಯವೇ ಆಶ್ಚರ್ಯದಿಂದ ತುಂಬಿರುವುದು. ನಾನು ವಕೀಲನು ನಿಜ. ಹೆಸರಿಗೆ ಮಾತ್ರ ಎಲ್ ಎಲ್. ಬಿ. ಎಂಬ ಅಕ್ಷರಗಳನ್ನು ಅಂಟಿಸಿಕೊಂಡಂತೆ ಆಗಿದೆ. ಈಗ ನಾನು ವಕೀಲರ ಗುಮಾಸ್ತನಿರುತ್ತೇನೆ. ( ಅವರ ಮುಖವು ಖಿನ್ನವಾಗಿ ಕಂಡಿತು. )

ನಿರ್ಮಲೆಗೆ ತುಂಬಾ ವ್ಯಥೆಯಾಯಿತು. ಒಂದೆರಡು ಸಮಾಧಾನದ ಮಾತನ್ನು ಹೇಳಬೇಕೆಂದು ಮಾಡಿದ್ದಳು. ಅಷ್ಟರಲ್ಲಿ ಘಡಿಯಾರದಲ್ಲಿ ಮೂರುಘಂಟೆ ಹೊಡೆದದ್ದರಿಂದ ಆಶ್ರಮದ ನೌಕರನು ( ಟೀ ) ಚಹಾ ತೆಗೆದುಕೊಂಡು ಬಂದನು.

ವೆಂಕಟರಾಯರು ಇನ್ನು ಹೊರಡಬೇಕೆಂದು ಆಲೋಚಿಸಿ ಹೊರಡಲು ಏಳುವವರಿದ್ದರು.

ನಿರ್ಮಲೆಯು ಚಹಾ ತೆಗೆದುಕೊಂಡು ಹೋಗಬೇಕಾಗಿ ಆಗ್ರಹಮಾಡಿದಳು. ಚಹಾ ಕುಡಿಯುವಾಗ ಅವರ ದುಃಖದ ಕಾರಣವನ್ನು ಕೇಳಬೇಕೆಂಬ ಅಭಿಲಾಷೆಯು ಆಕೆಗೆ ಹುಟ್ಟಿತು.

ನಿರ್ಮಲೆಯ ಬಾಯಿಂದ 'ಚಹಾ ತೆಗೆದುಕೊಂಡು ಹೋಗೆಂದು ಶಬ್ದ ಬಂದ ಮೇಲೆ ಯಾರಿಗೂ ಅದನ್ನು ಮೀರಿ ಹೋಗಲು ಮನಸ್ಸು ಬರುವಂತಿರಲಿಲ್ಲ!' ಕಾರಣ ವೆಂಕಟರಾಯರು ಚಹಾ ಕುಡಿಯಲು ನಿಂತದ್ದು ಆಶ್ಚರ್ಯವಲ್ಲ ಚಹಾ ಕುಡಿಯುತ್ತ ಕೂತರೆ ಆಫೀಸಿನ ಕೆಲಸಕ್ಕೆ ತೊಂದರೆಯಾಗಬಹುದೆಂದು ಗೊತ್ತಿದ್ದರೂ ಅವರು ಚಹಾ ತೆಗೆದುಕೊಳ್ಳಲು ನಿಂತರು.

ಚಹಾ ಕುಡಿಯುವಾಗ ತಮಾಷೆಯಾಗಿ ಮಾತಾಡಲು ಪ್ರಾರಂಭಿಸಿದರು. ಮತ್ತು ಚಹಾ ಕಪಿನ ಮೇಲೆ ನಿರ್ಮಲೆಯು ಬೀಡಿಯ ಪೆಟ್ಟಿಗೆಯನ್ನು ವೆಂಕಟರಾಯರ ಎದುರಿಗೆ ಸರಿಸಿದಳು. ( ಮಿತ್ರರಿಗೆ ಕೊಡುವುದಕ್ಕಾಗಿ ನಿರ್ಮಲೆಯು ಬೀಡಿಯನ್ನು ತರಿಸಿಟ್ಟಿರುತ್ತಿದ್ದಳು. )

**ನಿರ್ಮಲೆ:** — ನೀವು ಸ್ವಾತಂತ್ರ್ಯಪತ್ರವನ್ನು ಓದಿರಬಹುದಲ್ಲವೇ ?

**ವೆಂಕಟರಾವ್:** — ಹೌದು, ಓದಿರುವೆನು.

**ನಿರ್ಮಲೆ:** — ಜಗತ್ತೆಲ್ಲವೂ ಒಂದೇಸಮನಾಗಿರುವುದಿಲ್ಲ. ನಾನು ಲಗ್ನದ ಸಂಬಂಧ ನನ್ನ ಅಭಿಪ್ರಾಯವನ್ನು ಬಿಟ್ಟು ತಂದೆಯ ಅಭಿಪ್ರಾಯದಂತೆ ನಡೆದಿದ್ದರೆ ಪತ್ರದಲ್ಲಿ ಅವರು ಈ ತರಹ ಶರ್ತುಗಳನ್ನು ಬರೆಯುತ್ತಿರಲಿಲ್ಲ. ಅವರ ಈ ರೀತಿ ಶರ್ತುಹಾಕಿರುವುದು ದುರಾಗ್ರಹವಲ್ಲವೇ ?

**ವೆಂಕಟರಾವ್:**— ಶರ್ತುಹಾಕಿರುವುದರಲ್ಲಿ ಸ್ವಲ್ಪ ಚಮತ್ಕಾರ ವೇನೋ ಇರುವಂತೆ ತೋರುವುದು. ಆದರೆ ಅವರ ಅಭಿಪ್ರಾಯದಂತೆ ನೋಡಿದರೆ ಅದು ವ್ಯವಹಾರ ದೃಷ್ಟಿಗೆ ವಿರೋಧವಾಗಿಲ್ಲವೆಂದು ತೋರುವುದು.

**ನಿರ್ಮಲೆ:**— ಏನು ? ಅದು ವ್ಯವಹಾರಕ್ಕೆ ಸರಿಯಾಗಿರುವುದೇ ? ಎಂದಿಗೂ ಇಲ್ಲ. ಸ್ತ್ರೀಯರ ಸೌಭಾಗ್ಯ, ಸ್ತ್ರೀಯರ ಮೋಕ್ಷ, ಲಗ್ನದಲ್ಲಿಯೇ ಇರುವುದೆಂದು ಈಚೆಗೆ ತಂದೆಯವರಿಗೆ ತಿಳಿದು ಹೋಗಿತ್ತು. ಲಗ್ನವಾಗುವುದು ಹುಡುಗಿಯ ಇಷ್ಟವಿರಲಿ ಇಲ್ಲದಿರಲಿ ಲಗ್ನದ ವಿನಹ ಬೇರೆ ಆಲೋಚನೆಯೇ ಇಲ್ಲವೆಂಬುದು ಅವರ ತಲೆಯಲ್ಲಿ ಸೇರಿಹೋಗಿತ್ತು ಲಗ್ನದಂಥ ಮಹತ್ವದ ಕೆಲಸದಲ್ಲಿಯೂ ಇಂಥ ಶರ್ತುಗಳಿರಬೇಕೇ ! ಸ್ತ್ರೀಯರಿಗೆ ಸ್ವಲ್ಪವೂ ಮತಾಧಿಕಾರ ಬೇಡವೆ ? ಇಂಥ ಬಲಾತ್ಕಾರಕ್ಕೆ ನನಗೆ ಸಿಟ್ಟು ಬರುವುದು. ಈ ಶರ್ತನ್ನು ನಾನು ಎಂದೂ ಒಪ್ಪಲಾರೆ. ಇದು ಖಂಡಿತ.

**ವೆಂಕಟರಾವ್** - ಮೃತ್ಯುಪತ್ರದಲ್ಲಿ ಶರ್ತನ್ನು ಪಾಲಿಸುವ ವಿಚಾರಕ್ಕೆ ಬಲತ್ಕಾರವಿಲ್ಲವಲ್ಲ ! ಅದು ನಿನ್ನ ಸಂತೋಷದ ಮೇಲಿರುವುದು.

**ನಿರ್ಮಲೆ:**— ನನ್ನ ಇಷ್ಟದಂತೇ ! ( ಮುಖವನ್ನು ಮುದುರಿಸಿ ) ಮೂರುಸಾವಿರ ಖರ್ಚು ಮಾಡುವಲ್ಲಿ ಮೂರುನೂರು ತೆಗೆದುಕೊಂಡು ದೈನ್ಯತನದಿಂದ ಕಾಲಕಳೆಯುವುದು ಸಂತೋಷವೇ ಅಲ್ಲವೇ ?

**ವೆಂಕಟರಾವ್:**-- ಏಕೆ ? ದೈನ್ಯದಿಂದಲೇ ?

**ನಿರ್ಮಲೆ:**— ಮತ್ತೇನು ? ಮೂರುನೂರು ರೂಪಾಯಿಯಿಂದ ಏನಾದೀತು?

**ವೆಂಕಟರಾವ್:**-- ಎಷ್ಟೋ ಗಂಡಸರಿಗೆ ದಿವಸಕ್ಕೆ ಎಂಟು ಹತ್ತು ಗಂಟೆ ಕೆಲಸಮಾಡಿದರೂ ವರ್ಷಕ್ಕೆ ಮೂರುನೂರು ರೂಪಾಯಿ ಸಿಗುವುದಿಲ್ಲ. (ಮಾತಾಡುವಾಗ ಗಂಡಸರಿಗೆ ಎಂಬ ಶಬ್ದವನ್ನು ಸ್ವಲ್ಪ ಒತ್ತಿಹೇಳಿದರು)

**ನಿರ್ಮಲೆ:**- - ( ಸಿಟ್ಟಿನಿಂದ ) ಸಿಗುತ್ತಿರಲಿಕ್ಕಿಲ್ಲ! ಹೀಗೆಂದು ಸ್ತ್ರೀಯರಿಗೆ ಕಡಿಮೆಮಾಡಬೇಕೆಂಬುದು ಯಾವನ್ಯಾಯ ?

ನೀವೂ ನನ್ನಂತೆ ಕಷ್ಟವುಳ್ಳವರಾಗಿರುತ್ತೀರಾ? ಕಾರಣ ನನ್ನ ಕಷ್ಟದ ರಗಳೆ
ಯನ್ನು ನಿಮಗೇಕೆ ಹಚ್ಚಲಿ. ನಾನಾದರೋ ಏನು ಮಾಡಲಿ? ಯಾರಾ
ದರೂ ಪ್ರೀತಿಯಿಂದ ಕೇಳಿದರೆ ನನ್ನ ಹಣೇಬರಹದ ಚರಿತ್ರೆಯನ್ನು ಬಿಚ್ಚಿ
ಬಿಡುತ್ತೇನೆ. ಮತ್ತು ಈ ವಿಚಾರವನ್ನು ನಿಮ್ಮ ಮುಂದೆ ಮಾತ್ರ ಹೇಳಿರು
ತ್ತೇನೆ. ಇದುವರೆಗೆ ಯಾರಿಗೂ ಹೇಳಿರಲಿಲ್ಲ ಮತ್ತು ಈ ವಿಚಾರವೆಲ್ಲವೂ
ನಿನ್ನೆ ದಿವಸವೇ ನನಗೆ ಗೊತ್ತಾಗಿದೆ.

**ನಿರ್ಮಲೆ:—** (ದೊಡ್ಡ ಶ್ವಾಸ ಬಿಟ್ಟು) ನಿಜವಾಗಿಯೂ ನಿಮ್ಮ ಸುದ್ದಿ
ಹೃದಯದ್ರಾವಕವಿದೆ.

ಸಹಾನುಭೂತಿಗೋಸ್ಕರ ಒಂದು ನಿಟ್ಟುಸಿರನ್ನು ಬಿಡುವುದಕ್ಕಿಂತಲೂ
ಇನ್ನು ಏನೂ ಹೆಚ್ಚಿಗೆ ಮಾಡಲು ನಿರ್ಮಲೆಯು ಶಕ್ತಳಿರಲಿಲ್ಲ. ಅವಳ
ದುಃಖವೇ ಅವಳಿಗೆ ಹೆಚ್ಚಾಗಿತ್ತು. ಅದರಲ್ಲೂ ವೆಂಕಟರಾಯರ ದುಃಖವನ್ನು
ಕೇಳಿ ಅವಳಿಗೆ ದುಃಖವಾದದ್ದು ಆಶ್ಚರ್ಯವಲ್ಲ.

**ವೆಂಕಟರಾವ್.—** ನನ್ನ ಕಷ್ಟಗಳನ್ನೆಲ್ಲ ಸಹಾನುಭೂತಿಯಿಂದ
ಕೇಳಿದ್ದಕ್ಕೋಸ್ಕರ ನಿಮಗೆ ನಾನು ಋಣಿಯಾಗಿರುತ್ತೇನೆ.

ನಿರ್ಮಲೆಗೆ ಈ ಮಾತನ್ನು ಕೇಳಿದ ಕೂಡಲೆ ಕಣ್ಣಲ್ಲಿ ನೀರು ಬಂದು
ಬಿಟ್ಟವು. ಹೆಂಗಸರ ಮನಸ್ಸು ಕೋಮಲವಲ್ಲವೇ!

**ನಿರ್ಮಲೆ:** - ಕಾಮತರ ಅಭಿಪ್ರಾಯ ಕೇಳಿ ನೀವು ಗಾಬರಿಯಾಗಿ
ರುವಿರಲ್ಲವೆ?

**ವೆಂಕಟರಾವ್:—** ಏತಕ್ಕೆ ಹೆದರುವದು? ಮತ್ತು ಹೆದರಿಯಾ
ದರೂ ಮಾಡುವುದೇನು? ಮನಸ್ಸಿಗೆ ಒಂದುಸಾರೆ ಚಿಂತೆ ಹತ್ತಿಬಿಟ್ಟಿತು.
ಸರಿ. ಇನ್ನೇನು?

**ನಿರ್ಮಲೆ.—** ಇಲ್ಲವೆಂದರೂ ಪರಿಸ್ಥಿತಿ ಬಹಳ ಕಠಿಣವಿದೆ.

**ವೆಂಕಟರಾವ್:—** ಪರಿಸ್ಥಿತಿ ಕಠಿಣವೇನು? ಸಾವಿಗೆ ನಾನೇನು
ಹೆದರತಕ್ಕವನಲ್ಲ. ಮರಣದ ಕಷ್ಟವು ಒಂದೇಸಾರೆ ಯಾಗುವುದು. ಇನ್ನು

ಒಂದು ವರ್ಷ ಈ ಖಾಯಿಲೆಯ ವೇದನೆಯನ್ನೂ, ಅಪಮಾನವನ್ನೂ, ಅಪ ಹಾಸ್ಯವನ್ನೂ ಸಹಿಸುವುದಕ್ಕಿಂತ ಸಾವು ಮೇಲೆಂದೆಸಿಸಿ ದೇವರನ್ನು ಪ್ರಾರ್ಥಿ ಸುತ್ತಿರುವೆನು.

**ನಿರ್ಮಲೆ:**— ದೇವರು ಅನಾಥರಕ್ಷಕನಿದ್ದಾನೆ. ( ಎಂದು ಸಮಾ ಧಾನ ಹೇಳಿದಳು. )

ಕಾಗದವನ್ನು ತೆಗೆದುಕೊಂಡು ವೆಂಕಟರಾಯರು ಮನೆಗೆ ಹೊರಟು ಬಾಗಿಲನ್ನು ದಾಟಿದ್ದರು ಅಷ್ಟರೊಳಗೆ ನಿರ್ಮಲೆಯು ಅವರಿಗೆ ಕೂಗಿ, ನೀವು ನನಗೋಸ್ಕರ ಸ್ವಲ್ಪ ಕಷ್ಟಪಡುವಿರೇನು? ಎಂದು ಕೇಳಿದಳು.

**ವೆಂಕಟರಾವ್**— ಓಹೋ, ಅಡ್ಡಿ ಇಲ್ಲ.

**ನಿರ್ಮಲೆ:**— ನಾಳೆ ಮಧ್ಯಾಹ್ನ ಇಲ್ಲಿಗೇ ಫಲಾಹಾರಕ್ಕೆ ಬಂದರೆ ಒಳ್ಳೇದಾಗುತ್ತಿತ್ತು.

ವೆಂಕಟರಾಯರು ( ಮನಸ್ಸಿನಲ್ಲಿ ನಕ್ಕು ) ನಾಳೆ ಶನಿವಾರವಿದೆ; ಆಗ ಬಹುದು, ಬರುತ್ತೇನೆ.

**ನಿರ್ಮಲೆ:**— ಹಾಗಾದರೆ ಬರುತ್ತೀರಲ್ಲವೇ ?

**ವೆಂಕಟರಾವ್:**— ( ಬಹಳ ಸಂತೋಷದಿಂದ ) ಬರುತ್ತೇನೆ.

**ನಿರ್ಮಲೆ.**— ಬರುವುದಕ್ಕೆ ಆಲಸ್ಯ ಮಾಡಬೇಡಿರಿ. ನಿಮ್ಮ ಮತ್ತು ನನ್ನ ಲಾಭದ ಒಂದು ವಿಚಾರವನ್ನು ಬೋಧಿಸಬೇಕಾಗಿದೆ; ಇರಲಿ. ನಾಳೆ ಮಧ್ಯಾಹ್ನ ನೀವು ಬರಲೇಬೇಕು.

**ವೆಂಕಟರಾವ್**—ಖಂಡಿತ ಬರುತ್ತೇನೆ. ಎಂದು ಹೇಳುತ್ತ ಹೊರಟು ಹೋದರು.

---

# ೧೦ನೆಯ ಪರಿಚ್ಛೇದ.

## ನಿರ್ಮಲೆಯ ಬಂದಿವಾಸ.

ಸುಮಾರು ಮಧ್ಯಾಹ್ನದ ಎರಡು ಗಂಟೆಗೆ ನಿರ್ಮಲೆಯು ತನ್ನ ಬೈತಲೆಯು ಸರಿಯಾಗಿರುವುದೋ ಇಲ್ಲವೋ ಎಂದು ಕನ್ನಡಿಯಲ್ಲಿ ನೋಡುತ್ತ ಜಡೆಯ ಮೇಲೆ ಕೈಯನ್ನು ಎಳೆದುಕೊಂಡು (ತನ್ನಲ್ಲಿ ತಾನು; ಈ ದಿನ ಉಡುಪನ್ನು ಸಾದಾ ಮಾಡಿಕೊಳ್ಳಬೇಕು. ಕಾಲಿಸ ಉಡುಪನ್ನು ತೊಟ್ಟರೆ ವೆಂಕಟರಾಯರು ಸಂಕೋಚಪಟ್ಟಾರು. ಮತ್ತು ಸರಳರೀತಿಯಿಂದ ಮನಬಿಚ್ಚಿ ಮಾತಾಡಲಿಕ್ಕಿಲ್ಲ).

ಆದರೆ ಅವಳ ಆಲೋಚನೆಯು ಬಹಳಹೊತ್ತು ನಿಲ್ಲಲಿಲ್ಲ. ಮೂರು ಘಂಟೆಯ ಸಮಯಕ್ಕೆ ಅತಿ ಉತ್ತಮವಾದ ವಸ್ತ್ರಗಳನ್ನು ಧರಿಸಿ ತಯಾರಾಗಿ ವೆಂಕಟರಾಯರ ಬರುವಿಕೆಯನ್ನು ನಿರೀಕ್ಷಿಸುತ್ತ ಕುಳಿತುಕೊಂಡಳು. ಒಟ್ಟಿಯು ಮತ್ತು ಒಡವೆಗಳ ಆಶೆಯು ಸಾಮಾನ್ಯವಾಗಿ ಎಲ್ಲ ಬಾಲಕಿಯರಲ್ಲೂ ಇರುವದು ಸಹಜ. ಆದರೆ ನಿರ್ಮಲೆಗೆ ಒಡವೆಗಳ ಮೇಲೆ ಅಷ್ಟು ಅಪೇಕ್ಷೆ ಇರಲಿಲ್ಲ. ಕಾರಣ ಅವಳು ಒಂದೂ ಒಡವೆಯನ್ನು ಮೈಮೇಲೆ ಧರಿಸಲಿಲ್ಲ. ಇದ್ದವೂಕೂಡಾ ತೆಗೆದಿಟ್ಟಿದ್ದಳು.

ಆಶ್ರಮದಿಂದ ಮನೆಗೆ ಹೋದಮೇಲೆ ನಿರ್ಮಲೆಯು ಯಾವ ಕಾರ್ಯಭಾಗವನ್ನು ಯೋಚಿಸಿರುವಳು? ಎಂಬ ವಿಚಾರದಲ್ಲಿಯೇ ವೆಂಕಟರಾಯರು ಮಗ್ನರಾಗಿದ್ದರು. ಅವರಿಗೆ ಏನೊಂದೂ ಸೂಚಿಸಲಿಲ್ಲ ಮತ್ತು ನಿರ್ಮಲೆಯ ಮನಸ್ಸಿನ ಅಭಿಪ್ರಾಯವನ್ನು ತಿಳಿಯಬೇಕೆಂಬ ಅಭಿಲಾಷೆಯು ಹೆಚ್ಚಿತು.

ಒಪ್ಪಿಕೊಂಡ ಪ್ರಕಾರ ಮೂರುಘಂಟೆಗೆ ಸರಿಯಾಗಿ ವೆಂಕಟರಾಯರು ಆಶ್ರಮಕ್ಕೆ ಬಂದರು. ಅವರೂ ತಮ್ಮ ವಿಶೇಷವಾದ ಉಡುಪನ್ನು ಧರಿಸಿದ್ದರು. ಅವರ ಉಡಿಗೆ-ತೊಡಿಗೆಯನ್ನು ನೋಡಿ ತಾನೂ ಒಳ್ಳೇ ಉಡುಪನ್ನು ಧರಿಸಿದ್ದು ಒಳ್ಳೇದಾಯಿತೆಂದು ನಿರ್ಮಲೆಯು ಮನಸ್ಸಿನಲ್ಲಿಯೇ ಸಂತೋಷಪಟ್ಟಳು.

ವೆಂಕಟರಾಯರು ಬಂದೊಡನೆ ನಿರ್ಮಲೆಯು ತನ್ನ ಮೇಜಿನ ಮೇಲಿ
ರುವ ಸೂಚನೆಯ ಘಂಟೆಯನ್ನು ಒತ್ತಿದಳು. ಅಷ್ಟರೊಳಗೆ ಆಶ್ರಮದ
ಚಾಕರನು ಸ್ವಲ್ಪ ಫಲಾಹಾರವನ್ನೂ ಚಹಾವನ್ನೂ ತೆಗೆದುಕೊಂಡು ಬಂದು
ಇಟ್ಟು ಹೋದನು. ಫಲಾಹಾರ ನಡೆದಿತ್ತು. ಹವಾಮಾನ, ಊರಸ್ಥಿತಿ
ವಗೈರೆ ಹರಟೆ ಮಾತುಗಳನ್ನು ಮಾತಾಡುತ್ತ ಎಲ್ಲ ತಿಂಡಿಗಳನ್ನು ಮಾಯ
ಮಾಡಿ ವೆಂಕಟರಾಯರು ಆನಂದದ ತೇಗನ್ನು ತೇಗಿದರು. ಅಷ್ಟರಲ್ಲಿ ಬೀಡಿ
( ಸಿಗರೇಟ ) ಡಬ್ಬಿಯು ಮುಂದೆ ಬಂತು. ಅದರ ಹೊಗೆಯನ್ನು ವೆಂಕಟ
ರಾಯರು ಬಿಡಹತ್ತಿದ್ದರು.

ನಿರ್ಮಲೆಯು ತನ್ನ ರಾಗದ ಪೆಟ್ಟಿಗೆಯನ್ನು ತರಿದಳು. ಮತ್ತು
ವೆಂಕಟರಾಯರಿಗೆ ಈ ಕಡೆ ಆರಾಮ ಖುರ್ಚಿಯ ಮೇಲೆ ಬನ್ನಿ, ಮಾತಾ
ಡಲು ಸಮೀಪವಾಗುವದು; ಎಂದಳು.

ವೆಂಕಟರಾಯರು ನಿರ್ಮಲೆಯ ಅಭಿಪ್ರಾಯದಂತೆ ಬಂದು ಕುಳಿತು
ಕೊಂಡರು.

ನಿರ್ಮಲೆಯು ಪೆಟ್ಟಿಗೆ ಮನೆಗಳ ಮೇಲೆ ಮೆಲ್ಲಗೆ ಕೈಯನ್ನಿಡುತ್ತ
ನಿನ್ನೆ ಹೇಳಿದ್ದೆನಲ್ಲ? ನಮ್ಮೆಲ್ಲರ ಲಾಭದ ಆ .... (ಎಂದು ಒತ್ತಿಹೇಳಿದಳು.)

**ವೆಂಕಟರಾವ್**:— ನಿನ್ನೆ ಹೇಳಿದ್ದಿರಿ; ನಿಜ. ಆದರೆ . ... ..
(ಮುಖವನ್ನು ಮೇಲಕ್ಕೆತ್ತಿದರು )

**ನಿರ್ಮಲೆ**: — ( ಪೆಟ್ಟಿಗೆ ಮನೆಯನ್ನು ಸುಮ್ಮನೆ ಅಮುಕುತ್ತಿದ್ದಳೇ
ವಿನಹ ಬಾರಿಸುತ್ತಿರಲಿಲ್ಲ. ಅವಳ ಮನಸ್ಸಿನಲ್ಲಿ ಬೇರೆ ಆಲೋಚನೆಯಲ್ಲಿತ್ತು.
ಸ್ವಲ್ಪ ಹೊತ್ತಿನಮೇಲೆ ) ನಾನು ಹೇಳಿದ್ದೆ ಆದರೆ? ....

**ವೆಂಕಟರಾವ್**:— ಹಾಗೇಕೆ; ಆದರಲ್ಲಿ ಸಂದಿಗ್ಧವೇನು? ಸ್ಪಷ್ಟ
ವಾಗಿ ಹೇಳಬಹುದಲ್ಲ? ಆದರಲ್ಲಿ ಸಂಕೋಚಪಡಬೇಕಾಗಿಲ್ಲ. ....

**ನಿರ್ಮಲೆ**:- - ಸಂ–ಕೋ–ಚ–ಪಡುವುದರಿಂದಲೇ.... .

**ವೆಂಕಟರಾವ್** :— ನಮ್ಮೆಲ್ಲರ ಹಿತದ ಮಾತನ್ನು ಹೇಳಬೇಕಾದರೆ
ಸಂಕೋಚವಾದರೂ ಏನು? ( ಅವಳ ಮನಸ್ಸಿನ ಅಭಿಪ್ರಾಯವನ್ನು ತಿಳಿ
ಯದೆ ಸಹಜವಾಗಿ ಅವರು ಈ ಮಾತನ್ನು ಹೇಳಿದರು. )

**ನಿರ್ಮಲೆ:**— ನೀವು ಹೇಳುವುದು ನಿಜ. ಆದರೆ ಲೋಕವ್ಯವಹಾರದ ಕಡೆಗೂ ಸ್ವಲ್ಪ ನೋಡಬೇಕಾಗಿದೆ.

( ವೆಂಕಟರಾಯರಿಗೆ ಆಶ್ಚರ್ಯವಾಗಿ ಈ ಮಾತಿನ ಅರ್ಥವೇ ಅವರಿ ಗಾಗಲಿಲ್ಲ. )

**ನಿರ್ಮಲೆ:**--- ( ಸ್ವಲ್ಪಹೊತ್ತು ಸುಮ್ಮನಿದ್ದು ) ನಾನು ಲೋಕವ್ಯವ ಹಾರಕ್ಕೆ ಅಷ್ಟು ಮಹತ್ವ ಕೊಡುವುದಿಲ್ಲ. ಆದರೆ ಪ್ರಕೃತ ವಿಷಯವು ಮಹತ್ವದ್ದು ಮತ್ತು ನಾಜೂಕಿನದಿರುತ್ತದೆ.

**ವೆಂಕಟರಾವ್:**— ಅದು ಯಾವ ವಿಷಯವೋ ಸ್ಪಷ್ಟವಾಗಿ ಹೇಳಿ ಬಿಡಿರಿ ( ಎಂದು ಗಡಿಯಾರವನ್ನು ಕಿವಿಗೆ ಹಚ್ಚಿ ನೋಡಿದರು. )

ತನ್ನ ಮಾತಿನಿಂದ ವೆಂಕಟರಾಯರಿಗೆ ಬೇಸರವಾಗಿರಬಹುದೆಂದು ತಿಳಿದು ಮೂಲ ಪ್ರಶ್ನೆಯನ್ನು ಹೇಳಲು ಪ್ರಾರಂಭಿಸಿದಳು.

**ನಿರ್ಮಲೆ :**— ಮೃತ್ಯುಪತ್ರದೊಳಗಿನ ಶರ್ತನ್ನು ನೀವು ಓದಿರುವಿರಿ ಮತ್ತು ನಿಮ್ಮ ಸಮಾಚಾರವನ್ನು ನೀವು ನಿನ್ನೆ ದಿವಸವೇ ಹೇಳಿರುತ್ತೀರಿ; ಈಗಿನ ನಿಮ್ಮ ಕೃಷ್ಣಮಯವಾದ ಸಂಕಟವು ತೊಲಗಿದರೆ ನಿಮಗೆ ಸಂತೋಷ ವಾಗಬಹುದಲ್ಲವೇ ?

**ವೆಂಕಟರಾವ್:**—ಹೌದು, ಅದು ಪರಿಹಾರವಾಗುವ ಬಗೆ ಹೇಗೆ ?

**ನಿರ್ಮಲೆ:**— ಅದಕ್ಕೋಸ್ಕರವೇ ಏನಾದರೊಂದು ಆಲೋಚನೆ ತೆಗೆಯಬೇಕಾಗಿದೆ. ವಿಲ್ಲಿನೊಳಗಿನ ಶರ್ತು ನಿಮಗೆ (.. ....ಗದ್ಗದ ಸ್ವರದಿಂದ) ಗೊತ್ತಿರಬಹುದು. ಕಾರಣ ಲಗ್ನಮಾಡಿ ನನ್ನ ಸ್ವತಂತ್ರತೆಯ........ನ್ನು ಕಾ. . ಪಾ.... ಡಿ.... ರಿ.

( ಆಗ್ಗೆ ವೆಂಕಟರಾಯರು ತಲೆಯನ್ನು ಮೇಲಕ್ಕೆತ್ತಿದರು. ಅವಳ ಮಾತಿನ ಅರ್ಥವು ಅವರಿಗೆ ತಿಳಿಯಿತು. ಆದರೆ ಲಗ್ನ ಮಾಡುವುದರಿಂದ ಆಕೆಯ ಸ್ವತಂತ್ರತೆಯು ಹ್ಯಾಗೆ ಇಲ್ಲದಂತಾಗುವದು ? ಎಂಬುದು ಅವರಿಗೆ ತಿಳಿಯಲಿಲ್ಲ. ಸ್ತ್ರೀ ಸ್ವಾತಂತ್ರ್ಯದ ವಿಷಯವೂ ಅವರಿಗೆ ಗೊತ್ತಿರಲಿಲ್ಲ.)

ನನ್ನ ಮಾತುಗಳು ನಿಮಗೆ ಆಶ್ಚರ್ಯವಾಗಿ ತೋರುತ್ತವಲ್ಲವೆ? ಇದು ಮತದ ಪ್ರಶ್ನೆಯಾಗಿದೆ. ನನ್ನ ಮತವು ಹೀಗಿದೆ. "ಲಗ್ನಮಾಡಿಕೊಂಡ ನನ್ನ ಸ್ವಾತಂತ್ರ್ಯವನ್ನು ನಾನು ಎಂದಿಗೂ ಕಳಕೊಳ್ಳಲಾರೆ."

**ವೆಂಕಟರಾವ್**:— ಹೂಂ! ಎಂದು ತಲೆಯಲ್ಲಾಡಿಸಿದರು.

**ನಿರ್ಮಲೆ**:— ಆದರೆ ತಂದೆಯ ಆಸ್ತಿಯು ಮಾತ್ರ ಬಿಟ್ಟುಕೊಡಲಾರೆ!

**ವೆಂಕಟರಾವ್**:— ವಿಲ್ಲಿನಲ್ಲಿರುವ ಶರ್ತಿನಂತೆ ನಡೆಯದಿದ್ದರೆ ಆಸ್ತಿಯು ಹೇಗೆ ದೊರೆತೀತು?

**ನಿರ್ಮಲೆ**:— ಅದನ್ನೇ ನೋಡಬೇಕಾಗಿದೆ. ನಿಮ್ಮ ಸಹಾಯ ದೊರೆತಿದ್ದರೆ ...

**ವೆಂಕಟರಾವ್**: (ಆಶ್ಚರ್ಯದಿಂದ) ಏನು? ನಿಮ್ಮ ಅಭಿಪ್ರಾಯವೇ ನನಗೆ ತಿಳಿಯಲಿಲ್ಲ.

ಅಸಲು ಮೃತ್ಯುಪತ್ರವನ್ನು ತಂದು ಕೊಡಲು ಹೇಳುತ್ತಾಳೋ ಹ್ಯಾಗೆ ಎಂಬ ಅನುಮಾನವು ಅವರಿಗಾಯಿತು ಮತ್ತು ನಿನ್ನೆ ದಿವಸ ಪತ್ರದಲ್ಲಿ ಇಡಲು ಕೋರಿದ್ದಳು. ಅದ್ದರಿಂದ ಇದೇ ವಿಚಾರವಿರಬಹುದಾಗಿ ಅವರಿಗೆ ಖಾತ್ರಿಯಾಯಿತು. ಈಗಿನ ಪತ್ರವನ್ನು ಮುಚ್ಚಿಟ್ಟು, ಕೃತಕ ಪತ್ರವನ್ನು ಮಾಡಲು ತಿಳಿಸುತ್ತಿರಬಹುದೆಂದು ಅನುಮಾನವಾಗಿ ಬಾಯೊಳಗಿನ ಸಿಗರೇಟನ್ನು ಚಚ್ಚಿದರು. ವೆಂಕಟರಾಯರ ಚಿಂತೆ ಹೆಚ್ಚಾಗಿ ಕುರ್ಚಿಯ ಮೇಲೆ ಗೊಂಬೆಯಂತೆ ಕೂತು ನಿರ್ಮಲೆಯನ್ನೇ ನೋಡಹತ್ತಿದರು.

ತನ್ನ ಹೇಳಿಕೆಯಿಂದ ವೆಂಕಟರಾಯರ ಮನಸ್ಸಿನಲ್ಲಿ ವಿಪರೀತ ಕಲ್ಪನೆಯಾಗಿರುವಂತೆ ಅವರ ಮುಖಲಕ್ಷಣದಿಂದ ನಿರ್ಮಲೆಗೆ ತಿಳಿದು ಬಂತು. ಅದನ್ನು ಹೇಗೆ ಬದಲಾಯಿಸಬೇಕೆಂದು ಆಲೋಚಿಸಿ ಸ್ವಲ್ಪ ತಡೆದು ವೆಂಕಟರಾಯರನ್ನು ನೋಡಿ ಒಂದು ವಿಷಯವನ್ನು ನಿಮಗೆ ತಿಳಿಸಬೇಕಾಗಿದೆ ಎಂದು ಹೇಳಿದಳು.

ವೆಂಕಟರಾಯರು ಏನೂ ಹೇಳಲಿಲ್ಲ.

**ನಿರ್ಮಲೆ**.— ಶುದ್ಧ ವ್ಯಾಪಾರೀ ಸಂಬಂಧದ ಪ್ರಶ್ನೆಯು.

ವೆಂಕಟರಾಯರಿಗೆ ಏನೂ ತಿಳಿಯದೆ ಅವರ ಶಂಕೆಯು ವಿಪರೀತವಾಗಲಾರಂಭಿಸಿತು.

**ನಿರ್ಮಲೆ.**— ಮತ್ತೆ ಬೇರೆಯಿಲ್ಲ. ಲಗ್ನದ ವಿಷಯ (ವೆಂಕಟರಾಯರ ಮುಖವನ್ನು ನೋಡಲಾರಂಭಿಸಿದಳು)

**ವೆಂಕಟರಾವ್.**— ಲಗ್ನವು ?

ವೆಂಕಟರಾಯರ ಹಿಂದಿನ ಆಲೋಚನೆ ಮಾಯವಾಯಿತು. ಮತ್ತು ತನ್ನ ಆರೋಗ್ಯದ ವಿಷಯವು ಅವಳಿಗೆ ಗೊತ್ತಿದ್ದರೂ ಲಗ್ನದ ವಿಷಯವನ್ನು ತನ್ನಲ್ಲಿ ತೆಗೆದದ್ದಕ್ಕೋಸ್ಕರ ಅವರಿಗೆ ಆಶ್ಚರ್ಯವಾಯಿತು. ವೆಂಕಟರಾಯರು ಗಾಬರಿಯಾಗಿದ್ದುದನ್ನು ನಿರ್ಮಲೆಯು ನೋಡಿ, ಅವರನ್ನು ಇನ್ನು ಗಾಬರಿಯಲ್ಲಿ ಕೆಡವಬಾರದೆಂದು ಅವಳು ರಾಗದ ಪೆಟ್ಟಿಗೆಯನ್ನು ಬಾರಿಸಲು ಪ್ರಾರಂಭಿಸಿ "ನಾರೀ ಸ್ವಾತಂತ್ರ್ಯ" ಎಂಬ ಪದವನ್ನು ಹಾಡಲು ಪ್ರಾರಂಭಿಸಿದಳು. ಪದವು ಸ್ವಾರಸ್ಯವಾದದ್ದು, ಅದರಲ್ಲೂ ಅವಳ ಮಧುರಕಂಠ, ಕೇಳಬೇಕೇನು. ಮನಸ್ಸಿಗೆ ಅರ್ಥವಾಗುವಂತೆ ಅಭಿನಯವ ಮಾಡುತ್ತ ಹಾಡತೊಡಗಿದಳು. ಹಾಡುತ್ತಿರುವಾಗ ಅವಳ ಕಣ್ಣಿನಿಂದ ನೀರು ಉದುರುತ್ತಿದ್ದವು. ಸ್ತ್ರೀ ಜಾತಿಗೆ ಸ್ವಾತಂತ್ರ್ಯವಿಲ್ಲವೆಂಬ ಅರ್ಥವು ಆ ಪದದಲ್ಲಿ ಗರ್ಭಿತವಾದ್ದರಿಂದ ಈ ರೀತಿ ಅವಳಿಗೆ ಕಣ್ಣೀರು ಬಂದಿರಬಹುದು! ಆದರೆ ನಡು ನಡುವೆ ಸ್ವಲ್ಪ ಸಿಟ್ಟಿನಿಂದ ತುಟಿಯನ್ನು ಹಲ್ಲಿನಿಂದ ಕಚ್ಚುತ್ತಿದ್ದಳು.

ಹದಿನೈದು ನಿಮಿಷದಲ್ಲಿ ಸಂಗೀತವು ಮುಗಿದು ಪೆಟ್ಟಿಗೆಯು ಶಾಂತವಾಯಿತು. ಹಾಡುತ್ತಿರುವಾಗ ಅವಳು ಕೇವಲ ರಮಣೀಯವಾಗಿ ತೋರುತ್ತಿದ್ದಳು. ವೆಂಕಟರಾಯರಿಗೆ ಹಿಂದಿನ ಸಂದೇಹವೆಲ್ಲ ಬೈಲಾಗಿಹೋಯಿತು. ಇದನ್ನು ನಿರ್ಮಲೆಯು ತಿಳಿದು ನಿಮ್ಮ ಅಭಿಪ್ರಾಯವೇನು? ಎಂದು ಪುನಃ ಪ್ರಶ್ನಿಸಿದಳು.— (ವೆಂಕಟರಾಯರು ಮನಸ್ಸಿನಲ್ಲೇ) ಲಗ್ನದ ವಿಚಾರವನ್ನು ನನ್ನ ಸಂಗಡ ಯಾಕೆ ಕೇಳುವಳು? ಎಂಬ ಸಂಗತಿಯೇ ತಿಳಿಯುವದಿಲ್ಲವಲ್ಲ. ಎಂದು ಆಲೋಚಿಸಹತ್ತಿದರು.

**ನಿರ್ಮಲೆ**— ನೀವು ಏನೋ ವಿಚಾರ ಮಾಡುವವರಂತೆ ತೋರುವುದಲ್ಲ?

**ವೆಂಕಟರಾವ್**.— ವಿಚಾರವೆಂದರೇನು? ಲಗ್ನದ ವಿಷಯವೇ?

**ನಿರ್ಮಲೆ:—** ಕೇವಲ ವ್ಯಾಪಾರಕ್ಕೋಸ್ಕರವೇ ಲಗ್ನ.... ....

**ವೆಂಕಟರಾವ್**:— ನಿನ್ನ ಮಾತುಗಳೇ ನನಗೆ ಅರ್ಥವಾಗಲಿಲ್ಲ ....

**ನಿರ್ಮಲೆ:—** ವಿಷಯವೇನೋ ಲಗ್ನದ್ದು. ಆದರೆ ಇದು ನಿಜವಾದ ಲಗ್ನದ ವಿಚಾರವಲ್ಲ. ಶರ್ತು ಪಾಲಿಸಿ ಐಶ್ವರ್ಯವನ್ನು ಸಂಪಾದಿಸುವ ಮಟ್ಟಿಗೆ ಮಾತ್ರ ... ಲ . ಗ್ನ....

ಅವಳ ಮಾತು ಅಷ್ಟಿಗೆ ನಿಲ್ಲುವುದರೊಳಗೆ ಹೊರಗೆ ಯಾರೋ ನಿರ್ಮಲೇ ಎಂದು ಕೂಗಿದರು. ಅವಳು ಬಾಗಿಲವನ್ನು ತೆರೆದು ನೋಡಲು ಅವಳ ಭಾವನಾದ ವಿನಾಯಕನಾಗಿದ್ದನು. ಆಗ ಅವನ ಬರುವಿಕೆಯು ಆಕೆಗೆ ಸಮಾಧಾನವಾಗುವಂತಿರಲಿಲ್ಲ. ಆದರೆ ಏನು ಮಾಡುತ್ತಾಳೆ, ಉಪಾಯ ವಿಲ್ಲ. ಮನಸ್ಸಿನಲ್ಲಿರುವುದನ್ನು ಹೊರಗೆ ತೋರಿಸುವಂತಿರಲಿಲ್ಲ ಅವನಿಗೆ ಖುರ್ಚಿಯ ಮೇಲೆ ಕೂಡ್ರಿಸಿ ವೆಂಕಟರಾಯರ ಕಡೆ ಬೆರಳು ತೋರಿಸಿ ಇವರು ಸುಬ್ರಾಯನ್ ವಕೀಲರ ಗುಮಾಸ್ತರು. ಮೃತ್ಯುಪತ್ರದ ನಕಲನ್ನು ತೆಗೆದುಕೊಂಡು ಬಂದಿದ್ದರು ಎಂದು ತಿಳಿಸಿದಳು.

ನಿರ್ಮಲೆಯು ವೆಂಕಟರಾಯರ ಕಡೆ ತಿರುಗಿ ಈಗ ನೀವು ಹೋಗಿರಿ ನಾಳೆ ಎಂಟು ಘಂಟೆಗೆ ಉಳಿದ ನಕಲನ್ನು ತೆಗೆದುಕೊಂಡು ಬನ್ನಿರಿ. ಬಾಕಿ ವಿಷಯ ನಾಳೆ ಮಾತಾಡೋಣ.

ವೆಂಕಟರಾಯರು ಹೊರಟು ಹೋದರು .. ... ... ....

ಆ ದಿನ ಶನಿವಾರವಿದ್ದ ಕಾರಣ ಮಹಾವಿದ್ಯಾಲಯಕ್ಕೆ ಮಧ್ಯಾನ್ಹ ರಜೆ ಇತ್ತು. ಕಾರಣ ವಿನಾಯಕನು ನಿರ್ಮಲೆಯನ್ನು ಊರಹೊರಗಡೆ ತಿರು ಗಾಡಲು ಕರೆದೊಯ್ಯಬೇಕೆಂದು ಗಾಡಿ ಸಹ ತೆಗೆದುಕೊಂಡು ಬಂದಿದ್ದನು. ನಿರ್ಮಲೆಯು ಬರುವುದಿಲ್ಲವೆಂದು ಅವನಿಗೆ ಗೊತ್ತಿತ್ತು. ಆದರೆ ತಂದೆಯ ಆಜ್ಞೆ ಯನ್ನು ಮೀರಬಾರದೆ ಬಂದಿದ್ದನು. ಸ್ವಲ್ಪ ಹೊತ್ತು ಅಲ್ಲಿ ಇಲ್ಲಿಯ ಮಾತು ಕಥೆಗಳಾದ ಮೇಲೆ ವಿನಾಯಕನು ತಿರುಗಾಡಲು ಹೋಗುವದನ್ನು ತಿಳಿಸಿ ದನು. ನಿರ್ಮಲೆಯು ತನಗೆ ತಲೆ ನೋಯುವುದಾಗಿ ಹೇಳಿ ಬರವುದಾಗುವು

ದಿಲ್ಲವೆಂದು ಹೇಳಿಬಿಟ್ಟಳು. 'ಪಾಪ ಏನು ಮಾಡುತ್ತಾನೆ. ಒಬ್ಬನೇ ಹೋಗುವ ಪ್ರಸಂಗ ಬಂದಿತು.

ವಿನಾಯಕನು ಹೊರಟು ಹೋಗಲು " ಈ ದಿನವೇ ಇವನಿಗೆ ಇಲ್ಲಿಗೆ ಬರಬೇಕೆಂಬ ಆವಶ್ಯಕತೆಯಾದರೂ ಏನಿತ್ತು " ಎಂದು ಮನಸ್ಸಿನಲ್ಲಿ ಗುಣಗುಟ್ಟಿದಳು .

---

## ೧೧ನೆಯ ಪರಿಚ್ಛೇದ.



### ಸಾಧಕ ಬಾಧಕ ವಿಷಯಗಳು.

ವಿನಾಯಕರಾಯನು ಆಕಸ್ಮಿಕವಾಗಿ ಬಂದದ್ದು ವೆಂಕಟರಾಯರಿಗೆ ಒಳ್ಳೇದೇ ಆಯಿತು. ಯಾಕೆಂದರೆ ನಿರ್ಮಲೆಯ ಯೋಚನೆಗೆ ಯಾವ ಉತ್ತರವನ್ನು ಕೊಡಬೇಕೆಂಬುದನ್ನು ಆಲೋಚಿಸಲು ಅನುಕೂಲವಾಯಿತು.

ವೆಂಕಟರಾಯರು ಜನ್ಮದ ವಿಷಯಕ್ಕೆ ಹೀಗೆ ನಿರುತ್ಸಾಹಿಗಳಾಗಿದ್ದರು. ಆದರೆ ಕೆಲಸದ ದೆಸೆಯಿಂದ ನಿರ್ಮಲೆಯು ಸಮಾಚಾರವು ಮರೆತಿದ್ದ ಹಾಗಾಯಿತು. ಮನಸ್ಸಿಗೆ ಸ್ವಲ್ಪ ಆನಂದವಾಗುತ್ತಿತ್ತು. ಆದರೆ ನಿನ್ನೆಯ ಪ್ರಶ್ನೆಯನ್ನು ಕೇಳಿದಾಗಿನಿಂದ ಮನಸ್ಸಿಗೆ ಏನೇನೋ ಆಗಲಾರಂಭಿಸಿತು. ನವ ನಾಗರೀಕತೆಯ ಗಾಳಿಯು ಅವರ ಮನಸ್ಸಿಕ್ಕೆ ಇನ್ನೂ ಬೀಸಿರಲಿಲ್ಲ. ಮತ್ತು ಈಗಿನ ಸುಧಾರಣೆಯಕಡೆಗೆ ಅವರ ಲಕ್ಷ್ಯ ಇರಲಿಲ್ಲ. ವಿಶ್ವವಿದ್ಯಾಲಯದಲ್ಲಿರುವ ತರುಣರು ಉತ್ಸಾಹಿಗಳಾಗಿ ಸುಧಾರಣೆಯ ಮಾರ್ಗ ಹಿಡಿಯುವದನ್ನು ಅವರು ನೋಡಿದ್ದರು. ಆದರೆ ನಿರ್ಮಲೆಯ ವಿಚಾರವು ಅದಕ್ಕಿಂತಲೂ ಮುಂದೆ ಸಾಗಿದ್ದಾಗಿತ್ತು. ಇಂಥ ಅಸಭ್ಯ ಮತ್ತು ಅಕ್ರಮವಾದ ವಿಚಾರವನ್ನು ಅವರು ಇದುವರೆಗೆ ಕೇಳಿರಲಿಲ್ಲ. ಕಾರಣ ಅದು ಅವರಿಗೆ ಇಪ್ಪತ್ತನೇಶತಮಾನದ ಆಶ್ಚರ್ಯವೆಂಬಂತೆ ತೋರಿತು. ಆಕೆಯ ಆಲೋಚನೆಗೆ ನಿಧಾನವಾಗಿ ವಿಚಾರಮಾಡಲು, ಅದರ ಅರ್ಥವು ಅವರಿಗೆ ತಿಳಿಯಿತು. ಮಾತಾಡುವಭರದಲ್ಲಿ ಡಾಕ್ಟರರ ಅಭಿಪ್ರಾಯವನ್ನು ವೆಂಕಟರಾಯರು

ಅವಳಿಗೆ ತಿಳಿಸಿದ್ದರು. ಕಾರಣ ನನ್ನ ಪ್ರಕೃತಿಯನ್ನು ನೋಡಿ ಬುದ್ಧ್ಯಾ ಈ ವಿಷಯವನ್ನು ನನ್ನ ಹತ್ತಿರ ಹೇಳಿರಬಹುದೆಂದು ವೆಂಕಟರಾಯರಿಗೆ ಖಾತ್ರಿಯಾಯಿತು.

ನಿಜವಾದ ದೃಷ್ಟಿಯಿಂದ ಅವಳಿಗೆ ಲಗ್ನವು ಬೇಕಾಗಿರಲಿಲ್ಲ. ಮೃತ್ಯುಪತ್ರದಲ್ಲಿರುವ ಶರ್ತನ್ನು ಪಾಲಿಸುವುದಕ್ಕೂ ಐಶ್ವರ್ಯವನ್ನು ಸಂಪಾದಿಸುವುದಕ್ಕೂ ನಿಮಿತ್ತಮಾತ್ರ ಲಗ್ನವು ಆಕೆಗೆ ಅವಶ್ಯಕವಾಗಿ ಬೇಕಾಗಿತ್ತು. ಮತ್ತು ಇದನ್ನು ಅವಳು ಸ್ಪಷ್ಟವಾಗಿ ಹೇಳಿಯೇ ಬಿಟ್ಟಿದ್ದಳು. ಅವಳ ವ್ಯಾಪಾರೀ ಸಂಬಂಧದ ಲಗ್ನದ ವಿಚಾರವು ವೆಂಕಟರಾಯರ ಮನಸ್ಸಿಗೆ ಚನ್ನಾಗಿ ತಿಳಿದು ಮೈಮೇಲೆ ರೋಮಾಂಚಗಳು ಮೂಡಿದವು.

ವೆಂಕಟರಾಯರು ಪದವೀಧರರಿದ್ದು ಪಾಶ್ಚಾತ್ಯಸುಧಾರಣೆಯು ಅವರಿಗೆ ತಿಳಿದಿತ್ತು. ಅಲ್ಲಿ ಲಗ್ನಕ್ಕೆ ವ್ಯಾಪಾರೀ ಕರಾರಿನ ಸ್ವರೂಪವು ಲಾಗು ಇದೆ ಒಂದು ವರ್ಷದ ಮಟ್ಟಿಗೆ ಲಗ್ನ, ಎರಡು ವರ್ಷದ ಮಟ್ಟಿಗೆ ಲಗ್ನ, ಹೀಗೆಯೇ ಲಗ್ನ. ಯೋಗ್ಯಸಂಸ್ಕಾರದ ಮತ್ತು ಪವಿತ್ರತೆಯ ಚೇಷ್ಟೆಗಳು ಅಲ್ಲಿ ನಡೆಯುತ್ತಿವೆ. ಇಂಥ್ಯ ಸಂಗತಿಗಳನ್ನು ವರ್ತಮಾನ ಪತ್ರಗಳಲ್ಲಿ ಅವರು ಓದಿದ್ದರು. ನಿರ್ಮಲೆಯು ಅಲ್ಲಿಯ ಸ್ತ್ರೀಯರ ಅನುಕರಣ ಮಾಡಿದ್ದಳು ಅವಳಿಗೆ ಮುದ್ದತಿನ ಲಗ್ನವು ಕೂಡಾ ಬೇಕಾಗಿರಲಿಲ್ಲ. ಶರ್ತನ್ನು ಮುಗಿಸಿ ಐಶ್ವರ್ಯ ಸಂಪಾದನೆಗೆ ವ್ಯಾಪಾರೀರೀತಿ ಲಗ್ನದ ಸಂಬಂಧವು ಬೇಕಾಗಿರುವಂತೆ ಅವಳ ಮಾತಿನಿಂದಲೇ ತಿಳಿಯುತ್ತಿತ್ತು. ಕುರುಡು ಅನುಕರಣದ ಹುಚ್ಚು ಬಹಳ ಕಠಿಣವಿರುವುದು. ಆ ಹುಚ್ಚು ಒಂದಾವರ್ತಿ ತಲೆಯಲ್ಲಿ ಸೇರಿದರೆ ಮನುಷ್ಯನ ಅವಸ್ಥೆಯು ಎಲ್ಲಿಗೆ ಮುಟ್ಟುವುದೋ ಹೇಳಲಿಕ್ಕೆ ಆಗುವುದಿಲ್ಲ.

ಪಾಶ್ಚಾತ್ಯ ವಾಙ್ಮಯದ ಪರಿಚಯದಿಂದ ಪಾಶ್ಚಾತ್ಯ ಸ್ತ್ರೀಯರ ಅನುಕರಣವು ಅವಳ ತಲೆಯಲ್ಲಿ ಸೇರದಿದ್ದರೆ ಈ ರೀತಿ ಮೈಗೆ ಹತ್ತಿಬರುವ ಅಭದ್ರವಾದ ಆಲೋಚನೆಯು ಅವಳ ಬಾಯಿಂದ ಹೊರಗೆ ಬೀಳುವುದಕ್ಕೆ ಸಂಬಂಧವಿರುತ್ತಿರಲಿಲ್ಲ.

ಮತಸ್ವಾತಂತ್ರ್ಯದ ಸಾಕಾರದಲ್ಲಿ ಅಲ್ಲಿಯ ಸ್ತ್ರೀಯರು ತುಂಬಾ ಮುಂದುವರಿದಿದ್ದಾರೆ ಮತ್ತು ಈ ವಿಚಾರದಲ್ಲಿ ಅಲ್ಲಿಯ ಸ್ತ್ರೀಯರು ಚಳವಳಿ

ಯನ್ನು ಕೂಡ ನಡಿಸಿರುತ್ತಾರೆ. ಅವರ ಅಂಥ ಅನುಕರಣವು ಇದಲ್ಲವೇ ? ಅವಳ ಈ ವಿಚಾರಗಳನ್ನು ಎಷ್ಟು ಪರಿಶೀಲಿಸಿದರೂ ಅವು ಅಪವಿತ್ರ, ಮತ್ತು ಅಮಂಗಳ, ಅಭದ್ರವಾಗಿ ಅವರಿಗೆ ಕಾಣುತ್ತಿದವು. ನಿರ್ಮಲೆಯು ವಿದ್ಯಾವಂತಳು ಮತ್ತು ಚತುರಳೆಂಬುದನ್ನು ಪಿಲ್ಲಪತ್ರಬರೆಯುವಾಗ ಪ್ರಿನ್ಸಿಪಾಲರಿಂದ ವೆಂಕಟರಾಯರು ತಿಳಿದಿದ್ದರು. ಇಂಥ ಸುಶಿಕ್ಷಿತ ಆರ್ಯಮಹಿಳೆಯ ಬಾಯಿಂದ ಈ ವಿಚಾರವು ಹೊರಟದ್ದನ್ನು ಕೇಳಿ ಯಾರಿಗೆ ಆಶ್ಚರ್ಯವಾಗಲಿಕ್ಕಿಲ್ಲ ?. . . .ಅವಳಿಗೆ ದೊರೆತ ವಿಕಾಸಮಯವಾದ ಶಿಕ್ಷಣದ ಫಲವಿರಬಹುದೇನು ? ಈಗಿನ ಶಿಕ್ಷಣ ಕ್ರಮವೇ ಈ ರೀತಿ ವಿಪರೀತ ಕಲ್ಪನೆಗಳನ್ನು ವಿದ್ಯಾರ್ಥಿಗಳಲ್ಲಿ ಹುಟ್ಟಿಸುವುದೋ ? ಹೀಗಿದ್ದರೆ ಇಂಥ ಶಿಕ್ಷಣದಿಂದ ಎಲ್ಲ ಹುಡುಗಿಯರೂ ಇದೇ ರೀತಿಯಾಗುವುದಾದರೆ ಇಂಥ ಶಿಕ್ಷಣವೇ ಅನವಶ್ಯಕವೆಂದು ಅನೇಕ ವಿಚಾರಗಳು ವೆಂಕಟರಾಯರ ಮನಸ್ಸಿನಲ್ಲಿ ಬಂದುವು

ವೆಂಕಟರಾಯರು ತಮ್ಮ ಬಾಯಿಲೆಯ ದೆಸೆಯಿಂದ ಸ್ವಲ್ಪ ಹತಾಶಯರಾಗಿದ್ದರು. ಅದರಿಂದ ಅವರಿಗೆ ಜೀವವೇ ಹೊರೆಯಾಗಿತ್ತು. ಅದರಲ್ಲೂ ಬಡತನದ ಕಾಟ. ಇದು ಚಿಕ್ಕಂದಿನಿಂದಲೂ ನಡೆದುಬಂದ ರೂಢಿಯಾಗಿತ್ತು. ಆದರೆ ಅವರ ಹಿರಿಯರ ಶ್ರೇಷ್ಠ ಆಚರಣೆಯಿಂದ ಇವರಲ್ಲಿ ನೀತಿಯು ಮಾತ್ರ ನೆಲೆಸಿದಾಗಿತ್ತು. ಈ ಕಾರಣದಿಂದಲೇ ನಿರ್ಮಲೆಯ ಪ್ರಶ್ನೆಗೆ ಸರಿಯಾದ ಉತ್ತರ ಹೇಳುವ ಆಲೋಚನೆಯು ಅವರಲ್ಲಿ ಹುಟ್ಟಿತು. ಅವಳ ಮಾತಿಗೆ ಒಪ್ಪಿಗೆಕೊಡದೆ ಹ್ಯಾಗಾದರೂ ಮಾಡಿ ಅವಳ ಈ ಅಭದ್ರವಾದ ಆಲೋಚನೆ ತಪ್ಪಿಸಬೇಕೆಂದು ಯೋಚಿಸಿದರು. ಆದರೆ ಆಕೆಗೆ ಯಾವ ಉಪದೇಶ, ಹೇಗೆಮಾಡಬೇಕೆಂಬುದು ತಿಳಿಯಲಿಲ್ಲ. ಈ ಆಲೋಚನೆಯಲ್ಲಿಯೇ ಮಲಗಲು ನಿದ್ರೆ ಬರಲಿಲ್ಲ. ಉದ್ದೇಶವೂ ನೆರವೇರಲಿಲ್ಲ. ಉಪದೇಶಮಾಡದಿದ್ದರೆ ನಾನು ಇಷ್ಟು ಓದಿದ್ದೂ ವ್ಯರ್ಥವೆಂದು ಒಂದುಸಾರಿ ಅಸಮಾಧಾನವಾಗುವದು. ಹಾಗೂ ಹೀಗೂ ಬೆಳಗಿನ ಆರುಘಂಟೆ ಹೊಡೆಯಿತು. ಇನ್ನು ಎರಡು ತಾಸಿನಲ್ಲಿ ಅವಳ ಹತ್ತಿರ ಹೋಗಬೇಕು. ಆದರೆ ಅವಳಿಗೆ ಏನು ಹೇಳಬೇಕೆಂಬುದು ಮಾತ್ರ ನಿಶ್ಚಯವಾಗಲಿಲ್ಲ. ಇದೇ ಆಲೋಚನೆಯಲ್ಲಿರುವಾಗ ಏಳುಘಂಟೆಯೂ ಆಗಿಹೋಯಿತು. ಆಗ ಅವರು ಔಷಧಿ ತರಲು ಡಾಕ್ಟರರ ಕಡೆಗೆ ಹೋಗಲು ಮನೆಯಿಂದ ಹೊರಹೊರಟರು.

ದಾರಿಯಲ್ಲಿ ಹೋಗುತ್ತ ಹೀಗೆ ಆಲೋಚಿಸಿದರು. ಅವಳು ತಂದೆಯ ಮೇಲಿನ ಸಿಟ್ಟಿನಿಂದ ಆರೀತಿ ಹೇಳಿರಬಹುದು. ಈಗ ಸಿಟ್ಟು ಇಳಿದ ನಂತರ ತಾನು ಆಡಿದ ಮಾತಿಗೆ ಪಶ್ಚಾತ್ತಾಪಪಟ್ಟಿರಬಹುದು. ನಾನು ಹೋದ ನಂತರ ಈ ಪ್ರಶ್ನೆ ಬರಲಿಕ್ಕಿಲ್ಲವೆಂದು ನಿಶ್ಚಯಿಸಿದರು. ಆದರೆ ಈ ಆಲೋಚನೆಯು ಸ್ವಲ್ಪ ಹೊತ್ತಿನಲ್ಲಿಯೇ ಮಾಯವಾಯಿತು. . .

ನಿನ್ನೆ ದಿವಸ ಒಬ್ಬ ತರುಣಿಯು ಡಾಕ್ಟರರ ಹತ್ತಿರ ಬಂದು ತನ್ನ ಪ್ರಕೃತಿಯ ವಿಚಾರವಾಗಿ ಕೂಲಂಕುಷವಾಗಿ ವಿಚಾರಿಸಿ ಹೋದಂತೆ ವೆಂಕಟರಾಯರಿಗೆ ತಿಳಿಯಿತು. ಡಾಕ್ಟರರ ಮಾತಿನ ಮೇಲಿಂದ ಅವಳು ನಿರ್ಮಲೆಯೇ ಇರಬಹುದೆಂದು ವೆಂಕಟರಾಯರು ಊಹಿಸಿದರು. ಆಕೆಯ ವ್ಯಾಪಾರೀ ಲಗ್ನದ ವಿಚಾರವು ಈಗ ಪಕ್ಕಾ ತಿಳಿದಂತಾಯಿತು. ಮತ್ತು ಅವಳ ಕುಟಿಲ ನೀತಿಯು ಅವರಿಗೆ ಚನ್ನಾಗಿ ಗೊತ್ತಾಯಿತು. ಒಂದುವರ್ಷವೂ ಬದುಕಲಾರೆನೆಂದು ಹೇಳಿದ ವಿಷಯವನ್ನು ಪರೀಕ್ಷಿಸಿ ತಿಳಿದುಕೊಳ್ಳಲು ಡಾಕ್ಟರರ ಹತ್ತಿರ ವಿಚಾರಿಸುವುದಕ್ಕೆ ಬಂದಿರಬಹುದು! ಹಾಗಿಲ್ಲದಿದ್ದರೆ ನನ್ನ ಪ್ರಕೃತಿಯ ವಿಚಾರವನ್ನು ಕೂಲಂಕುಷವಾಗಿ ವಿಚಾರಿಸಲು ಕಾರಣವೇನಿತ್ತು.

ಡಾಕ್ಟರರ ಮನೆಗೆ ಹೋದವರು ಅಲ್ಲಿಂದಲೇ ನಿರ್ಮಲೆಯ ಹತ್ತಿರ ಹೋಗಬೇಕೆಂದು ಮೊದಲಿಗೆ ವೆಂಕಟರಾಯರ ಆಲೋಚನೆ ಇತ್ತು. ಆದರೆ ಅಲ್ಲಿ ಹೋದ ಮೇಲೆ ಈ ವಿಷಯ ತಿಳಿದದ್ದರಿಂದ ಈಗ ಹೋದರೆ ಅವಳು ಏನಾದರೂ ಕೇಳಬಹುದು. ಎಂದು ಆಲೋಚಿಸಿ ವಾಪಸು ಮನೆಗೆ ಬಂದರು ಮತ್ತು ಈಗ ಕೆಮ್ಮು ಜಾಸ್ತಿಯಾಗಿದೆ. ಈಗ ಬರಲು ಸಾಧ್ಯವಿಲ್ಲ. ಮಧ್ಯಾಹ್ನ ಮೂರಕ್ಕೆ ಬರುತ್ತೇನೆ. ಎಂದು ಟೆಲಿಫೋನ್‌ಮಾಡಿ ಮನೆಯಲ್ಲಿ ಆಲೋಚಿಸುತ್ತ ಕುಳಿತರು.

ಅವರು ಮನೆಗೆ ಹೋಗುವುದರೊಳಗೆ ಒಬ್ಬ ಸಾಹುಕಾರನು ಮನೆಯ ಬಾಗಿಲಲ್ಲಿ ಕುಳಿತಿದ್ದನು. ಸಾಹುಕಾರನನ್ನು ನೋಡಿದೊಡನೆ ನಿರ್ಮಲೆಯ ವಿಷಯವಾದ ಚಿಂತೆಯು ಅಡಗಿಹೋಗಿ. ಸಾಲದ ಚಿಂತೆಯು ಅವರ ಕಣ್ಣೆದುರಿಗೆ ನಿಂತುಬಿಟ್ಟಿತು.

**ಸಾಹುಕಾರ**. -- ನನಗೆ ಏನೋ ಅಡಚಣೆ ( ಅನಾನುಕೂಲ ) ಬಂದಿರುವುದರಿಂದ ದುಡ್ಡಿನ ತೊಂದರೆ ಬಹಳವಾಗಿದೆ. ಕಾರಣ ನೀವು ಎಂಟು ದಿವಸದಲ್ಲಿ ಒಂದು ಸಾವಿರ ರೂಪಾಯಿಯನ್ನಾದರೂ ತಂದು ಕೊಡಬೇಕು.

ವೆಂಕಟರಾಯರು ತಮ್ಮ ಎಲ್ಲ ಅನಾನುಕೂಲಗಳನ್ನೂ ವಿವರಿಸಿ ಹೇಳಿ, ಸಾವಿರ ರೂಪಾಯಿ ಬಿಟ್ಟು ಸಾವಿರ ಕಾಸು ಸಹ ಸಿಗುವದು ಕಷ್ಟ. ಹೀಗೆ ಅನೇಕ ವಿಧದಿಂದ ಅವರಿಗೆ ಅಂಗಲಾಚಿ ಬೇಡಿಕೊಂಡು ಹೇಳಿದರು. ಏನು ಹೇಳಿದರೂ ಸಾಹುಕಾರನು ಕೇಳಲಿಲ್ಲ. ಕೊನೆಗೆ ಉಪಾಯವಿಲ್ಲದೆ ಎಲ್ಲಿಯಾದರೂ ಸಿಕ್ಕರೆ ನೋಡೋಣವೆಂದು ಹೇಳಿ, ಅವನಿಗೆ ಸಮಾಧಾನ ಮಾಡಿ ಕಳಿಸಿದರು. ಅವರಿಗೆ ಸಾಹುಕಾರನ ಮೇಲೆ ಹೆಸರಿಡಲು ಅವಕಾಶವಿರಲಿಲ್ಲ ಯಾಕಂದರೆ ಅವರ ಹಣವು ಬಹಳ ದಿವಸದ್ದಿತ್ತು. ಮತ್ತು ಅವನ ಹೇಳಿಕೆಯ ಮೇರೆಗೆ ತೊಂದರೆಯು ವಿಶೇಷವಾಗಿದ್ದಂತೆ ತೋರುತ್ತಿತ್ತು. ವೆಂಕಟರಾಯರ ಆರ್ಥಿಕಸ್ಥಿತಿಯೂ ಅಷ್ಟೇ ಇತ್ತು. ತಿಂಗಳು ತುಂಬಿದೊಡನೆ ಸುಬ್ಬಾರಾಯರು ಐವತ್ತು ರೂಪಾಯಿ ಕೊಡುತ್ತಿದ್ದರು. ಇಂಥ ಸ್ಥಿತಿಯಲ್ಲಿ ಸಾವಿರ ರೂಪಾಯಿಗಳನ್ನು ಹೇಗೆ ಭರ್ತಿಮಾಡುವದು ? ಇಷ್ಟಮಿತ್ರರನ್ನು ಕೇಳೋಣವೆಂದರೆ ಅವರು ಜಾಸ್ತಿಯಾಗಿರಲಿಲ್ಲ. ಇದ್ದ ಒಬ್ಬಿಬ್ಬರೂ ಅವರ ವರ್ಗಕ್ಕೆ ಸೇರಿದವರಾಗಿದ್ದರು ! ಯಾವರೀತಿ ರೂಪಾಯಿ ಭರ್ತಿಮಾಡಬಹುದೆಂದು ಅವರು ಬಹಳ ಆಲೋಚನೆ ಮಾಡಹತ್ತಿದರು ಏನೂ ಸೂಚಿಸಲಿಲ್ಲ. ಬಹಳ ವಿಚಾರ ಮಾಡುತ್ತ ಖೋಲಿಯೊಳಗೆ ಅತ್ತಿತ್ತ ತಿರುಗಾಡುತ್ತಿದ್ದರು. ಹನ್ನೊಂದು ಘಂಟೆಯಾದರೂ ಊಟಕ್ಕೆ ಬರಲಿಲ್ಲವೆಂದು ಭೀಮಾಬಾಯಿಯು ಅವರನ್ನು ಹುಡುಕಲು ಬಂದರು. ಆಗ ಅವರಿಗೆ ಹೊತ್ತುಗೊತ್ತಾಗಿ ಊಟಕ್ಕೆ ಹೋದರು. ಊಟದಕಡೆ ಅವರ ಲಕ್ಷವೇ ಇರಲಿಲ್ಲ. ಎರಡು ತುತ್ತು ಊಟಮಾಡಿ ಎದ್ದು, ಪುನಃ ಖೋಲಿಗೆ ಬಂದು ಆಲೋಚಿಸಹತ್ತಿದರು. ವಿಚಾರ ಮಾಡುತ್ತ ಮಾಡುತ್ತ ಮನಸ್ಸಿನಲ್ಲಿ ಹೀಗೆ ತೋರಿತು. ನಾನು ನಿರ್ಮಲೆಯ ಯೋಜನೆಗೆ ಒಪ್ಪಿದರೆ ನನ್ನ ದುಡ್ಡಿನ ತೊಂದರೆಯು ತಪ್ಪಬಹುದು. ಮತ್ತು ಅವಳ ಹೇಳಿಕೆಯ ಮೇಲಿಂದ ಹಾಗೆ ಕಾಣುತ್ತಲೂ ಇತ್ತು. ಆದರೆ ಈ ಆಲೋಚನೆ ಬಂದೊಡನೆ ಅವರಲ್ಲಿ ಅವರಿಗೇ ಪಶ್ಚಾತ್ತಾಪವಾಯಿತು. ಮತ್ತು ಮನಸ್ಸಿನಲ್ಲೇ ಇದು ಎಂಥ ಅಧಃಪಾತ! ನಾನು ನಿರ್ಮಲೆಗೆ ಎರಡು ಉಪದೇಶದ.

ಮಾತುಕೋಳತಕ್ಕವನಿದ್ದೆನು. ಆದರೆ ನಾನೇ ಆವಳ ಯೋಚನೆಗೆ ಒಪ್ಪಲು ಸಿದ್ಧನಾದೆನಲ್ಲ! ನನ್ನ ಶಿಕ್ಷಣವು ಎಲ್ಲಿ ಹೋಯಿತು. ಈ ದುಷ್ಟ ಮತ್ತು ಅಬಲ ಆಲೋಚನೆಯು ನನ್ನ ಮನಸ್ಸಿನಲ್ಲಿ ಹೇಗೆ ಬಂತು. ಶರೀರದ ಅಶಕ್ತತೆಯು ಪರಿಣಾಮವಾಗಿರಲಿಕ್ಕಿಲ್ಲವಲ್ಲವೇ? ಹೌದು ಅದೇ? ದೃಢಕಾಯದ ಆಲೋಚನೆಗಳು ದೃಢವಾದವು. ರೋಗಿಗಳ ಆಲೋಚನೆಗಳು ಅಬಲವಾದವು ಇರುತ್ತವೆ. ಮತ್ತು ದಾರಿದ್ರ್ಯದ ಪರಿಣಾಮದಿಂದ ಮನುಷ್ಯನು ಏನೇನನ್ನು ಮಾಡಬಾರದ ಕೆಲಸಗಳನ್ನು ಕೂಡ ಮಾಡಿಬಿಡುತ್ತಾನೆ. ಅದರಂತೆ ಸಂಸ್ಕಾರದ ಕೊರತೆಯಿಂದ ನನಗೆ ಇಂಥ ಆಲೋಚನೆಗಳು ಬಂದವರೇ? ಇರಲಿ ....

ಯಾರಿಗೆ ಶಿಕ್ಷಣದ ಲಾಭ ದೊರಕುವದಿಲ್ಲವೋ ಅವರಿಗೂ ನಮ್ಮಂಥ ಶಿಕ್ಷಣ ಹೊಂದಿದ ಪದವೀಧರರಿಗೂ ಹೆಚ್ಚು ಕಡಿಮೆ ಏನು? ಕಷ್ಟಕಾಲದಲ್ಲಿ ನಮಗೆ ಬರುವಂಥ ಆಲೋಚನೆ ಕೀಳಾದದ್ದೇ? ಈ ನ್ಯಾಯದಲ್ಲಿ ಸತ್ವವೇ ಇಲ್ಲವೇನು! ಅದು ಹೇಗೂ ಇರಲಿ, ಇಂಥ ನಿರ್ಣಯದ ವಿಚಾರಕ್ಕೆ ನಾನು ಮನಸ್ಸು ಮಾಡುವವನಲ್ಲ. ಈಗಲೇ ಹೋಗಿ ನಿರ್ಮಲೆಯ ಯೋಚನೆಗೆ ನನ್ನ ನಿಷೇಧವನ್ನು ವ್ಯಕ್ತಮಾಡುತ್ತೇನೆ. ಹಾಗೆ ಮಾಡದಿದ್ದರೆ ಮೇಲಿಂದಮೇಲೆ ಇದೇ ಆಲೋಚಿಸಿ ಬಂದು ನನ್ನನ್ನು ಅದರಲ್ಲಿಯೇ ಮಗ್ನ ಮಾಡಿಬಿಟ್ಟೀತು.

ನಿರ್ಮಲೆಯ ಹತ್ತಿರ ಹೋಗಲು ಉಡುಪನ್ನು ಧರಿಸಿದರು. ಅಷ್ಟರಲ್ಲಿ ಅವರ ಕೋಪವು ಶಾಂತವಾಗಿ, 'ಮನಸ್ಸು ಶಾಂತವಾದ ವಿನಾ ಬೇರೆ ಕಡೆ ಹೋಗುವುದು ಬುದ್ಧಿವಂತರ ಲಕ್ಷಣವಲ್ಲ' ಎಂಬ ಸುವಿಚಾರವು ಅವರ ಮನಸ್ಸಿನಲ್ಲಿ ಬಂತು. ಕೂಡಲೆ ಅಂಗಿಯನ್ನು ತೆಗೆದು ಇಟ್ಟರು. ಹಾಗು ಕೋಣೆಯೊಳಗೆ ಅತ್ತಿಂದ ಇತ್ತ ತಿರುಗಾಡಲು ಪ್ರಾರಂಭಿಸಿದರು. ನಿರ್ಮಲೆಯ ವಿಷಯದ ಚಿಂತೆಯು ಪುನಃಪುನಹ ಅವರನ್ನು ತೊಂದರೆ ಕೊಡಹತ್ತಿತು. ಇದರ ಸಾಧಕ ಬಾಧಕಗಳನ್ನು ಚಿಕಿತ್ಸೆಮಾಡಿ ನೋಡಬೇಕೆಂದು ನಿಶ್ಚಯಿಸಿ ಮೇಜಿನ ಡ್ರಾ ತೆಗೆದು ಒಂದು ಕಾಗದದ ಮೇಲೆ ಮೊದಲು ಬಾಧಕ ವಿಷಯಗಳನ್ನು ಬರೆಯಹತ್ತಿದರು. ನಿರ್ಮಲೆಯ ಯೋಚನೆಯಲ್ಲಿ (೧) ವಿಷಯವು ಅಭದ್ರ, ಸ್ವಾರ್ಥ. ಮತ್ತು ದುಷ್ಟವಾದದ್ದಿದೆ (೨) ಸ್ವಚ್ಛಂದ ವೃತ್ತಿ

ಇವರಿಂದ ಶಿಕ್ಷಣ ಬುದ್ಧಿಯು ವಿಕಾಸವಾಗಬಹುದು. ಹೇಗೂ ಮಾಡಿ ಒಬ್ಬ ಸ್ತ್ರೀ ತರುಣಿಯನ್ನು ಸರಿಯಾದ ಮಾರ್ಗಕ್ಕೆ ಹಚ್ಚಿದ್ದರೆ ನನಗೆ ಪುಣ್ಯವು ಸಂಭವಿಸಬಹುದು. ನನ್ನ ಸ್ವಾರ್ಥದ ಕಡೆಗೆ ನೋಡಿದರೆ ಇವರಿಂದ ಸಾಹುಕಾರರ ತಗಾದೆಯನ್ನು ಕೂಡ ತಪ್ಪಿಸಿಕೊಳ್ಳಬಹುದು. ದುಡ್ಡಿನ ಅನುಕೂಲತೆ ಆದನಂತರ ಡಾಕ್ಟರರ ಅಭಿಪ್ರಾಯದಂತೆ ಒಳ್ಳೇ ಹವೆಯ ಸ್ಥಳಕ್ಕೆ ಹೋಗಬಹುದು. ಅಲ್ಲೇ ನನ್ನ ಪ್ರಕೃತಿಯು ಸುಧಾರಿಸಬಹುದು. ಇನ್ನು ಕಾಲವಿಳಂಬಿಸಿದರೆ ನಾನು ಬದುಕುವ ಭರವಸೆಯೇ ಇಲ್ಲ. ಎಂದು ಡಾಕ್ಟರರು ಮೊದಲೇ ಹೇಳಿರುತ್ತಾರೆ. ಎಲ್ಲ ವಿಧದಿಂದಲೂ ಆಲೋಚನೆ ಮಾಡಲಾಗಿ ಆಕೆಯ ಆಲೋಚನೆಗೆ ಒಪ್ಪಬಹುದೆಂದು ತೋರುತ್ತದೆ. ವಿಷಯವೇನೋ ಕಠಿಣವಾದದ್ದು, ನಿಜ. ಆದರಲ್ಲೇ ಕಷ್ಟಬಟ್ಟು ಸುಖವನ್ನು ಹುಡುಕಿಕೊಳ್ಳುವುದು ಬುದ್ಧಿವಂತಿಕೆಯ ಕೆಲಸವಾಗಿದೆ. ಕಲ್ಪನೆಗೆ ಹೆದರದೆ ಕಾರ್ಯಮಾಡಿ ಗೆಲ್ಲಬೇಕು. ಆದರಿಂದ ಖಂಡಿತ ಜಯಸಿಕ್ಕಬಹುದು.

ಅವರ ಮನಸ್ಸು ಹಾಗೂ ಹೀಗೂ ಹೊಯ್ದಾಡಿ ಲಗ್ನವಾಗಲು ಒಪ್ಪುವಂತೆ ಕ್ರಮಕ್ಕೆ ಬಂದಿತು. ಅಷ್ಟರೊಳಗೆ ಗಡಿಯಾರ ನೋಡಲು ಎರಡೂವರೆಗೆ ಐದುಮಿನಿಟು ಮಾತ್ರ ಕಡಿಮೆ ಇತ್ತು. ಬೆಳಿಗ್ಗೆ ಟೆಲಿಫೋನ್ ಮಾಡಿದ್ದು ನೆನಪಾಗಿ ಕೂಡಲೆ ಉಡುಪನ್ನು ಧರಿಸಿ ಎರಡೂವರೆಗೆ ಸರಿಯಾಗಿ ಮನೆಯಿಂದ ಹೊರಗೆ ಹೊರಟರು.



# ೧೨ ನೆಯ ಪರಿಚ್ಛೇದ.



## ಗಾಳಿಯಂತಹ ಸ್ವಾತಂತ್ರ

ವಿನಾಯಕರಾಯನ ಆಗಮನವು ವೆಂಕಟರಾಯರಿಗೆ ಅನುಕೂಲವಾಯಿತು. ನಿರ್ಮಲೆಗೆ ಮಾತ್ರ ಒಂದು ವಿಘ್ನವೇ ಬಂದಹಾಗಾಯಿತು. ಯಾರಿಗೇ ಆಗಲಿ ಒಂದು ಕೆಲಸಕ್ಕೆ ಕೂತಮೇಲೆ ಅದನ್ನು ಮುಗಿಸಿಬಿಡುವುದೇ ಒಳ್ಳೇದೆಂದು ತೋರುವವು ಕೂತಹೊತ್ತಿಗೆ ಕೆಲಸ ಪೂರೈಸದಿದ್ದರೆ ಮಾತಿನ ಅಭಿಪ್ರಾಯ ಮತ್ತು ಇತರರ ಸಲಹೆಯಿಂದ ಆ ಕೆಲಸ ಕೆಡುವ ಸಂಭವವಿರುತ್ತದೆ.

ನಿರ್ಮಲೆಯೂ ಒಳ್ಳೇ ಚತುರಳಿದ್ದಳು ಅವಳ ಮನಸ್ಸಿನಲ್ಲಿ ಆಗಲೇ ಆ ಆಲೋಚನೆಯನ್ನು ಒಪ್ಪಿಸಿಬಿಡಬೇಕೆಂದು ಮಾಡಿದ್ದಳು. ತನ್ನ ರೂಪಕ್ಕೆ ವೆಂಕಟರಾಯರು ಮರುಳಾದ ವಿಚಾರವನ್ನು ಅವಳು ಮೊದಲೇ ತಿಳಿದಿದ್ದಳು. ಅವರ ಮನಸ್ಸು ಈಗ ಸರಿಯಾಗಿರುವುದರಿಂದ ಈಗಲೇ ಈ ಪ್ರಶ್ನೆಯನ್ನು ತೀರಿಸಿಬಿಡಬೇಕೆಂದೂ. ಅವರಿಗೆ ಆಲೋಚಿಸಲು ಅವಕಾಶ ಕೊಡಕೂಡದೆಂದೂ, ಅವಕಾಶ ದೊರೆತು ಅವರು ತಮ್ಮ ಇಷ್ಟಮಿತ್ರರ ಅಭಿಪ್ರಾಯವನ್ನು ತಿಳಿದುಕೊಂಡದ್ದಾದರೆ ಅವರಲ್ಲಿ ಭಿನ್ನಾಭಿಪ್ರಾಯ ತೋರಬಹುದು ಕೆಲಸವು ಕೆಟ್ಟೀತೆಂದು ಆಲೋಚಿಸಿದಳು. ಒಪ್ಪಿಗೆ ದೊರೆತರೆ ಕೂಡಲೆ ಕೆಲಸ ಜರುಗಿಸಿ ಬಿಡಬೇಕೆಂದು ಹಾತೊರೆಯುತ್ತಿದ್ದಳು. ಅಲ್ಲದೆ ವೆಂಕಟರಾಯರ ಅವಸಾನವನ್ನೂ ಅವಳು ತಿಳಿದುಕೊಂಡಿದ್ದಳು. ರೋಗಿಷ್ಟ ಜನರು ತಮ್ಮ ಮಾನಸಿಕ ದುರ್ಬಲತೆಯಿಂದ ಮಾತಾಡುವ ಭರದಲ್ಲಿ ಹೆಚ್ಚು ಆಲೋಚಿಸಲಾರದೆ ಯಾವುದೇ ಕೆಲಸಕ್ಕಾದರೂ ಒಂದೊಂದು ಸಲ ಒಪ್ಪಿಗೆ ಕೊಡುವ ಸಂಭವವಿರುತ್ತದೆ. ಅದರಂತೆ ಈ ಸಮಯದಲ್ಲೇ ತನ್ನ ಕಾರ್ಯಸಾಧನದ ಆಲೋಚನೆ ನಿರ್ಮಲೆಗೆ ಇತ್ತು. ಆದರೆ ಮನುಷ್ಯ ಪ್ರಯತ್ನದಂತೆ ಎಲ್ಲಾ ಕಾರ್ಯಗಳು ಎಲ್ಲಿ ನಡೆಯುತ್ತವೆ! ....

ವಿನಾಯಕನು ಹೋದಮೇಲೆ ಅವಳು ಏನು ಕೆಲಸ ಮಾಡಬೇಕು ? ಎಂಬುದರ ಆಲೋಚನೆ ಮಾಡುತ್ತಿದ್ದಳು. ಹಿಡಿದ ಕೆಲಸ ನೆರವೇರುವುದೋ ಇಲ್ಲವೋ ಎಂಬ ಭೀತಿಯುಂಟಾಯಿತು. ಆದರೆ ತನ್ನ ಮೋಹಕ್ಕಾದರೂ ನಾಳೆ ವೆಂಕಟರಾಯರು ಬಂದೇ ತೀರುವರೆಂದು ಅವಳಿಗೆ ಖಾತ್ರಿ ಇತ್ತು. ಅವರು ಬಂದಾಗ ಆದಷ್ಟು ಪ್ರಯತ್ನಮಾಡಿ ತನ್ನ ಕೆಲಸಕ್ಕೆ ಅವರನ್ನು ಒಪ್ಪಿಸಬೇಕೆಂದು ದೃಢಸಂಕಲ್ಪ ಮಾಡಿಕೊಂಡಳು. ಮತ್ತು ಕೂಡಲೇ ಕಾಮತ ಡಾಕ್ಟರರ ಮನೆಯ ಕಡೆ ಹೊರಟಳು. ವೆಂಕಟರಾಯರ ಪ್ರಕೃತಿಸಂಬಂಧವಾಗಿ ಅನೇಕ ಪ್ರಶ್ನೆಗಳನ್ನು ಡಾಕ್ಟರರಿಗೆ ಪ್ರೀತಿಯಿಂದ ಕೇಳಿದಳು. ಇವಳ ಮಾತಿನ ಮೇಲಿಂದ ಡಾಕ್ಟರರಿಗೆ ನಿರ್ಮಲೆಯು ವೆಂಕಟರಾಯರಿಗೆ ಕೇವಲ ಬಂಧುವಿರಬಹುದೆಂದು ತೋರಿ, ನಿಜವಾದ ಸಂಗತಿಯೆಲ್ಲವನ್ನೂ ತಿಳಿಸಿದರು. ಡಾಕ್ಟರರು ತಮ್ಮ ಮಾತಿನಿಂದ ವೆಂಕಟರಾಯರ ಭೂಲೋಕದ ಯಾತ್ರೆಯು ಮುಗಿಯಿತೆಂದು ತೋರುವ ಅಭಿಪ್ರಾಯವನ್ನೇ ಸೂಚಿಸಿದ್ದರು. ವಿನಾಯಕನು ಬಂದದ್ದರಿಂದ ಕೆಲಸಕ್ಕೆ ವಿಘ್ನವೇನೋ ಆಯಿತು. ಆದರೆ ಡಾಕ್ಟರರ ಅಭಿಪ್ರಾಯ ತಿಳಿದದ್ದಕ್ಕೋಸ್ಕರ ಅವಳಿಗೆ ಇದ್ದುದರಲ್ಲಿಯೇ ಸಂತೋಷವಾಯಿತು. ರಾತ್ರಿ ಅವಳಿಗೆ ಸರಿಯಾಗಿ ನಿದ್ರೆ ಬಂದಿದ್ದುವು. ಆದರೆ ಬೆಳಗಾದ ಮೇಲೆ ಮಾತ್ರ ಆಗಾಗ್ಗೆ ಗಡಿಯಾರವನ್ನೇ ನೋಡುತ್ತ ಇದ್ದಳು. .... ....

ಎಷ್ಟು ಹೊತ್ತಿಗೆ ಎಂಟುಘಂಟೆಯಾದೀತು, ಮತ್ತು ವೆಂಕಟರಾಯರು ಬಂದಾರು, ತನ್ನ ಕೆಲಸ ಹೇಗೆ ನೆರವೇರೀತು; ಈ ವಿಚಾರದಲ್ಲಿಯೇ ಅವಳು ತಲ್ಲೀನಳಾಗಿದ್ದಳು. ಖುರ್ಚಿಯ ಮೇಲೆ ಕೂತು ಸೀರೆಯ ಝುರಿಯನ್ನು ತಿಕ್ಕುತ್ತಿದ್ದಳು. ಅಷ್ಟರಲ್ಲಿ ಟೆಲಿಫೋನಿನ ಗಂಟೆಬಾರಿಸಿತು. ಅವಳು ಉತ್ಸಾಹದಿಂದ ನಳಿಗೆಯನ್ನು ಕಿವಿಗೆ ಹಚ್ಚಿಕೊಂಡು ಸಮಾಚಾರವನ್ನು ಕೇಳಿ ನಿರಾಶಳಾದಳು. ಆದರೆ ಏನು ಮಾಡುತ್ತಾಳೆ. ಅವರ ದಾರಿಯನ್ನು ಕಾಯದಿದ್ದರೆ ಗತಿಯೇ ಇರಲಿಲ್ಲ. ತಾನೇ ವೆಂಕಟರಾಯರ ಮನೆಗೆ ಹೋಗಿ ಮಾತಾಡಿಕೊಂಡು ಬರಬೇಕೆಂದು ಅವಳ ಮನಸ್ಸಿಗೆ ಬಂತು. ಆದರೆ ಅಲ್ಲಿಗೆ ಹೋಗಿ ತನ್ನ ಕೆಲಸಕ್ಕೆ ಅವರು ಸಮ್ಮತಿಸದಿದ್ದರೆ ಅಪಘಾತವಾದೀತೆಂದು ಹೋಗುವದನ್ನು ರಹಿತಪಡಿಸಿದಳು, ಆದರಲ್ಲೂ ಅವರು ಮಧ್ಯಾನ್ಹ ಬರುವುದಾಗಿ ತಿಳಿಸಿದ್ದರು.

ನಿರ್ಮಲೆಯು ಮೂರು ಘಂಟೆಯವರೆಗೆ ತುಂಬಾ ಕಷ್ಟದಿಂದ ಕಾಲವನ್ನು ಕಳೆದಳು. ಮೂರು ಘಂಟೆಗೆ ಸರಿಯಾಗಿ ವೆಂಟರಾಯರು ಬಂದರು. ಆಗ ನಿರ್ಮಲೆಯು ಆರಾಮ ಖುರ್ಚಿಯಮೇಲೆ ಬಿದ್ದುಕೊಂಡಿದ್ದಳು. ವೆಂಕಟರಾಯರನ್ನು ನೋಡಿದೊಡನೆ ಅವಳಿಗೆ ಸ್ವಲ್ಪ ಹುರುಪು ಬಂದಂತಾಯಿತು. ಅವಳ ಮನಸ್ಸಿನಲ್ಲಿ ನಿನ್ನೆ ದಿವಸದ ಚಿಂತೆಯ ವಿನಃ ಬೇರೊಂದು ಆಲೋಚನೆಯೇ ಇರಲಿಲ್ಲ. ಸಿಗರೇಟಿನ ಡಬ್ಬಿಯನ್ನು ಅವರ ಎದುರಿಗೆ ಸರಿಸಿ, ನಿನ್ನೆ ದಿವಸದ ಆಲೋಚನೆ ಅಲ್ಲಿಗೇ ನಿಂತು ಹೋಯಿತಲ್ಲ? ಎಂದು ಹೇಳಿದಳು.

ವೆಂಕಟರಾಯರು ಹೊಗೆ ಬಿಡುವುದರಲ್ಲಿ ಮಗ್ನರಾಗಿದ್ದರು. ಕಾರಣ ನಿರ್ಮಲೆಯು ಅದೇ ಮಾತನ್ನು ಪುನಹ ಹೇಳಿದಳು.

**ವೆಂಕಟರಾವ್**:— ಈ ದಿನ ಅದನ್ನು ಮುಗಿಸಿ ಬಿಡಬೇಕಾಗಿದೆ.

**ನಿರ್ಮಲೆ**:— ನನ್ನ ಅಭಿಪ್ರಾಯವನ್ನು ನಾನು ನಿನ್ನಿನ ದಿವಸವೇ ಹೇಳಿರುತ್ತೇನೆ. ಮತ್ತು ಈ ದಿನ ನಿಮ್ಮ ಅಭಿಪ್ರಾಯ ಕೇಳತಕ್ಕದ್ದಿರುವುದು.

**ವೆಂಕಟರಾವ್**:— ಆದರೆ ನಿಮ್ಮ ಅಭಿಪ್ರಾಯವನ್ನು ನೀವು ಸ್ಪಷ್ಟವಾಗಿ ಎಲ್ಲಿ ಹೇಳಿರುವಿರಿ?

**ನಿರ್ಮಲೆ**:— ಸ್ಪಷ್ಟ! ಸ್ಪಷ್ಟ! ಅಂದರೆ ಇನ್ನೂ ಏನು ಹೇಳಬೇಕು?

**ವೆಂಕಟರಾವ್**:— ಲಗ್ನವು—ಲಗ್ನದ ದೆಸೆಯಿಂದ ಅಲ್ಲ! ವ್ಯಾಪಾರೀ ದೃಷ್ಟಿಯಿಂದ! ಎಂದು ಹೇಳಿದರೆ ಅದರ ಅಭಿಪ್ರಾಯ ನನಗೆ ಆಗುವುದಿಲ್ಲ. (ಅವರಿಗೆ ಲಗ್ನದ ವಿಚಾರ ಗೊತ್ತಿದ್ದರೂ ಅದನ್ನು ಅವಳಿಗೆ ತೋರ್ಪಡಿಸದೆ ಹೀಗೆ ಮಾತಾಡಿದರು.)

**ನಿರ್ಮಲೆ**:— ತಂದೆಯ ಆಸ್ತಿಗಳೆಲ್ಲವೂ ನನಗೆ ದೊರೆಯಬೇಕಾಗಿದೆ.

**ವೆಂಕಟರಾವ್**:— ನಿಜ; ಆದರೆ ಲಗ್ನದ ಶರ್ತನ್ನು ಪಾಲಿಸದ ವಿನಃ ಅದು ಹೇಗೆ ದೊರೆತೀತು?

**ನಿರ್ಮಲೆ**:— ಲಗ್ನದ ಬಂಧನವು ನನಗೆ ಬೇಡವಾಗಿದೆ.

**ವೆಂಕಟರಾವ್**:— ಹಾಗೆಂದರೇನು?

**ನಿರ್ಮಲೆ:**— ಐಶ್ವರ್ಯ ಸಿಗುವವರೆಗೆ ಲಗ್ನಬೇಕಾಗಿದೆ! ಹೆಚ್ಚು ಹೇಳುವುದೇನು? ಈಗ ನಾನು ಎಷ್ಟು ಸ್ವತಂತ್ರಳಿರುವೆನೋ ಅಷ್ಟೇ ಸ್ವತಂತ್ರವು ಲಗ್ನವಾದಮೇಲೆ ಇರಬೇಕು!

**ವೆಂಕಟರಾವ್:**— ಅಂದರೆ! ಶರ್ತು ಮುರಿಯುವ ವರೆಗೆ ನಿಮಗೆ ಹಂಗಾಮಿಲಗ್ನ ಬೇಕಾಗಿರುವುದಲ್ಲವೇ? (ಈ ಮಾತನ್ನು ಲೇವಡಿಗೋಸ್ಕರ ಹೇಳಿದರು.) ಆಗಲಿ. ನಾನು ಈ ಕೆಲಸಕ್ಕೆ ಒಪ್ಪಿಕೊಂಡರೆ ನನಗೆ ಲಾಭವೇನು?

**ನಿರ್ಮಲೆ:**— ಈ ವಿಚಾರ ನಾನೇ ಹೇಳತಕ್ಕವಳಿದ್ದೆ.

**ವೆಂಕಟರಾವ್:**— ಅದೇನು? ಸ್ಪಷ್ಟವಾಗಿ ಹೇಳಿಬಿಡಿ.

**ನಿರ್ಮಲೆ:**— ಒಂದೆರಡು ಸಾವಿರ ರೂಪಾಯಿ ನಿಮ್ಮ ಹೆಸರಿಗೆ. (ಮುಂದೆ ಮಾತಾಡಗೊಡದೆ)

**ವೆಂಕಟರಾವ್:**— ಅಂ! ಎರಡು ಸಾವಿರವೇ! ನನ್ನ ಸಾಲವೇ ಏಳು ಸಾವಿರವಿರುವಾಗ? ....

ನಿರ್ಮಲೆಗೆ ಆಶ್ಚರ್ಯವಾಯಿತು. ವೆಂಕಟರಾಯರ ಬಡತನವು ಇಷ್ಟು ದೂರವಿದೆ ಎಂದೂ ಮತ್ತು ಇಷ್ಟು ಸಾಲವಿರಬಹುದೆಂದೂ ಅವಳಿಗೆ ತಿಳಿದಿರಲಿಲ್ಲ. ವೆಂಕಟರಾಯರೂ ಈ ಹಿಂದೆ ಹೇಳಿರಲಿಲ್ಲ. ಅವರೆ ಅವರು ಎಲ್ ಎಲ್. ಬಿ., ಎನ್ನುವುದು ಮಾತ್ರ ಅವಳಿಗೆ ಗೊತ್ತಿತ್ತು. ಮನೆಯಲ್ಲಿ ಸಾಧಾರಣ ಅನುಕೂಲತೆ ಇಲ್ಲದೆ ಯಾರೂ ಇಂಥ ಪರೀಕ್ಷೆಗಳನ್ನು ಓದಲಾರ ರೆಂಬ ತಿಳುವಳಿಕೆ ಆಕೆಗಿತ್ತು. ಈ ಸಾಲದ ವಿಷಯ ಅವಳಿಗೆ ಮೊದಲೇ ಗೊತ್ತಾಗಿದ್ದರೆ ಲಗ್ನದ ವಿಷಯ ತೆಗೆಯುತ್ತಿದ್ದಳೋ ಇಲ್ಲವೋ ಎಂದು ಅನು ಮಾನವಾಗುತ್ತದೆ. ವಿನಾಕಾರಣ ಇಷ್ಟು ರಕಮನ್ನು ಕೊಡಲು ಯಾರಿಗೆ ಮನಸ್ಸು ಬಂದೀತು?

ಸ್ವಲ್ಪಹೊತ್ತು ಅವಳು ಏನೂ ಮಾತಾಡಲಿಲ್ಲ. ಸಾಲದ ವಿಷಯ ಒಂದು ಬಿಟ್ಟರೆ ಉಳಿದ ವಿಷಯಗಳೆಲ್ಲವೂ ಸರಿಯಾಗಿದ್ದವು. ಅವರು ಪದವೀ ಧರರು. ಅವರ ಸಂಗಡ ಲಗ್ನಮಾಡಿಕೊಳ್ಳುವುದರಿಂದ ಯಾರೂ ಹೆಸರಿಡು ವಂತಿಲ್ಲ. ಅಂದಮೇಲೆ ದುಡ್ಡಿನ ವಿಚಾರದಲ್ಲಿ ಸ್ವಲ್ಪ ಜಾಸ್ತಿ ಖರ್ಚು ಮಾಡ

ಬೇಕಾಗುವದು. ಆಗಲಿ; ಸಮ್ಮತಿಕೊಡೋಣವೆಂದುಮನಸ್ಸಿನಲ್ಲಿ ಆಲೋಚಿಸಿ.

**ನಿರ್ಮಲೆ:**— ಸಾಲ ತೀರಿದರೆ ಸರಿಯಷ್ಟೇ! ಮತ್ತೇನಾಗಬೇಕು ?

**ವೆಂಕಟರಾವ್:**—ಸಾಲವೊಂದು ತೀರಿದರೆ ಹ್ಯಾಗಾದೀತು? ನನ್ನ ಅವಸ್ಥೆಗೆ....

**ನಿರ್ಮಲೆ:**— ತಿಂಗಳಿಗೆ ನೂರುರೂಪಾಯಿ. ( ಮನಸ್ಸಿನಲ್ಲಿ ಒಂದು ವರ್ಷದಮಟ್ಟಿಗೆ ಮಾತ್ರ )

**ವೆಂಕಟರಾವ್:**— ಸಾಕು; ಸರಿಯಾಗಿ ಹೇಳಿದಿರಿ. ( ಎಂದು ಸಿಗರೇಟನ್ನು ಹಚ್ಚಿ ಸೇದುತ್ತ ) ಎಲ್ಲವೂ ಸರಿಹೋಯಿತು. ಲಗ್ನವಾದಮೇಲೂ ನಿಮಗೆ ಪೂರ್ಣ ಸ್ವತಂತ್ರವಿರಬೇಕೋ ?

**ನಿರ್ಮಲೆ:**— ನೋಡಿರಿ; ಬಾಹ್ಯೋಪಚಾರಕ್ಕೆ ಮಾತ್ರ ಗಂಡಹೆಂಡಿರಂತಿರಬೇಕು. ಈಗ ಮಾಡಿದ ಶರ್ತಿನಂತೆ ಇಬ್ಬರೂ ನಡೆದುಕೊಳ್ಳಬೇಕು. ಹಾಗಿಲ್ಲದಿದ್ದರೆ ಲೋಕಾಪವಾದಕ್ಕೆ ಗುರಿಯಾಗಬೇಕಾದೀತು. ತಿಳಿಯಿತೋ?

**ವೆಂಕಟರಾವ್:**— ಹೂಂ! ( ಅವರು ಮನಸ್ಸಿನಲ್ಲಿ ಏನನ್ನೋ ಆಲೋಚಿಸುವಂತೆ ತೋರುತ್ತಿತ್ತು. )

**ನಿರ್ಮಲೆ:**— ನೋಡಿರಿ; ಇದಕ್ಕೆ ಒಪ್ಪಿರುತ್ತೀರಿ! ಈ ವಿಷಯಕ್ಕೆ ಪೂರ್ಣ ವಿಚಾರ ಮಾಡಿರಿ, ಇಲ್ಲದಿದ್ದರೆ ಆ ಮೇಲೆ ಪಶ್ಚಾತ್ತಾಪವಾದೀತು!

ವೆಂಕಟರಾಯರು ಮೊದಲೇ ಈ ವಿಚಾರ ಮಾಡಿಕೊಂಡಿದ್ದರು. ಅದು ನಿರ್ಮಲೆಗೆ ಹೇಗೆ ತಿಳಿದೀತು!

**ವೆಂಕಟರಾವ್:**— ನಾನು ಪೂರ್ಣ ವಿಚಾರ ಮಾಡಿರುತ್ತೇನೆ. ನಿಮ್ಮ ವಿಚಾರವನ್ನು ನೀವು ಭದ್ರಪಡಿಸಿಕೊಳ್ಳಿರಿ.... ....

**ನಿರ್ಮಲೆ:**— ಒಂದು ಸಾರಿ ಹೇಳಿದ ಮಾತಿಗೆ ಎಂದೂ ತಪ್ಪಲಿಕ್ಕಿಲ್ಲ.

**ವೆಂಕಟರಾವ್:**— ನಾನು ಪದವೀಧರನಿರುವೆನು. ಪದವೀಧರರು ಎರಡುಸಾರೆ ಮಾತಾಡುವುದೇ ಇಲ್ಲ. ಆ ಮೇಲೆ ನಿಮ್ಮ ಮನಸ್ಸಿಗೆ ವ್ಯಸನವಾಗಬಾರದೆಂದು ಪುನಃ ಹೇಳಿದೆನು. ಇಷ್ಟೇ....

**ನಿರ್ಮಲೆ:**— ಪೂರ್ಣ ವಿಚಾರಮಾಡಿ ಈ ವಿಷಯವನ್ನು ನಿಮ್ಮ ಎದುರಿಗೆ ಇಟ್ಟಿರುವೆನು.

ವೆಂಕಟರಾವ್:— ಹಾಗಾದರೆ ಎಲ್ಲದಕ್ಕೂ ಒಪ್ಪಿಗೆಯಾದಂತೆ ಆಯಿತಲ್ಲವೇ? ಹಾಗಾದರೆ ಲಗ್ನವಾಗುವುದೆಲ್ಲಿ?

ನಿರ್ಮಲೆ:— ಕಮಿಾಟಿಯ ಸಭಾಗೃಹದಲ್ಲಿ.

ವೆಂಕಟರಾವ್:— ಛೇ! ಲಗ್ನವು ಶಾಸ್ತ್ರೋಕ್ತವಾಗಿ ಜರುಗಬೇಕಲ್ಲವೇ? ಕಾರಣ ಆ ಮಂದಿರದಲ್ಲಿ ಬೇಡ.

ನಿರ್ಮಲೆ:— ನಿಜ.

ವೆಂಕಟರಾವ್:— ಆದಕಾರಣ ಹಾಗೆ ಹೇಳಿದ್ದು.

ನಿರ್ಮಲೆ:— ನಮ್ಮ ರಾಧಾಸದನದಲ್ಲಿ ವಿಧಿಪೂರ್ವಕ ಮಾಡೋಣ.

ವೆಂಕಟರಾವ್:— ಆಗ ಬಹುದು.... ....

ನಿರ್ಮಲೆ:— ಈಗ ಮುಹೂರ್ತ ವಗೈರೆ ನೋಡಿ, ಎಲ್ಲ ತಯಾರ ಮಾಡಿರಿ. ಪ್ರಕೃತ ನಿಮ್ಮ ಖರ್ಚಿಗೋಸ್ಕರ ನಾಳೆ ಒಂದುನೂರು ರೂಪಾಯಿ ಕಳಿಸಿಕೊಡುತ್ತೇನೆ. ಮುಹೂರ್ತವು ಆದಷ್ಟು ಸಮಿಾಪದ್ದು ಆಗಿರಲಿ!

ವೆಂಕಟರಾವ್:— ಬಹಳ ಸಮಿಾಪವಾದದ್ದನ್ನೇ ಇಡಿಸುವೆನು. ಅದರ ಕಾಳಜಿ ಬೇಡ. (ಎಂದು ಹೇಳಿ, ವೆಂಕಟರಾಯರು ಹೊರಡಲು ತಯಾರಾದರು.) ನಾನು ಮುಂದಿನ ಕಾರ್ಯಕ್ಕೆ ಪ್ರಾರಂಭಿಸುತ್ತೇನೆ. (ಹೊರಟರು.) ಸಾಹುಕಾರರ ಬಾಬತು ಮಾ... (ಎಂದು ಹೇಳಿ, ಆಕೆಯನ್ನು ನೋಡುತ್ತ ಹೊರಟುಹೋದರು.)

ನಿರ್ಮಲೆ:— (ಮನಸ್ಸಿನಲ್ಲಿ) ನನ್ನ ಮನಸ್ಸಿನಂತೆ ಕಾರ್ಯವೇನೋ ಆಯಿತು. ಇನ್ನು ಐಶ್ವರ್ಯವೂ ಸಿಗುವುದು. ಮತ್ತು ಬೇಕಾದಹಾಗೆ ಸ್ವತಂತ್ರ! ನಮ್ಮ ತಂದೆಯು ಮಾಡಿಟ್ಟ ಆಲೋಚನೆಯನ್ನು ಹೇಗೆ ಸ್ವಲ್ಪದರಲ್ಲಿ ಬಿಡಿಸಿದೆನು?

ಆವಳಿಗೆ ಬಹಳ ಸಂತೋಷವಾಗಿತ್ತು. ಅಷ್ಟರಲ್ಲಿ ಸಾಯಂಕಾಲ ತಿರುಗಾಡುವ ವೇಳೆಯಾಯಿತು. ಕಾರಣ ಕೈಯ್ಯಲ್ಲಿ ಛತ್ರಿಯನ್ನು ಹಿಡಿದುಕೊಂಡು ಬಂದರದಕಡೆ ಹೊರಟು ಹೋದಳು.

---

# ೧೩ನೆಯ ಪರಿಚ್ಛೇದ.

## ನಾವು ಬಲವಾದ ಜೋಯಿಸರು.

ವೆಂಕಟರಾಯರು ಜಾತಿಯಲ್ಲಿ ಉತ್ತಮವರ್ಗದವರಾಗಿದ್ದರು. ಆರ್ಥಿಕ ದುರವಸ್ಥೆಯಿಂದ ನಿರ್ಮಲೆಯ ಯೋಚನೆಗೆ ಅವರು ಅನುಕೂಲವಾಗಿರ ಬಹುದು. ಯಾಕಂದರೆ — ನಿರ್ಮಲೆಯ ಮನೆಯಿಂದ ವಾಪಸು ಬಂದ ಮೇಲೆ ಸಾಹುಕಾರರ ತೊಂದರೆ ತಪ್ಪಿದ್ದಕ್ಕೋಸ್ಕರ ಅವರಿಗೆ ಸ್ವಲ್ಪ ಸಂತೋಷ ವಾಗಿತ್ತು. ಆದರೂ ಅವರ ಮನಸ್ಸಿನಲ್ಲಿ ಏನೇನೋ ಕಳವಳವು ಉಂಟಾಗಿ ಸದ್ವಿಚಾರದ ಕಡೆಗೆ ಮನಸ್ಸು ತಿರುಗಿ, ತಾವು ಕ್ಷುದ್ರಸ್ವಾರ್ಥದಕಡೆ ಲಕ್ಷ ಗೊಟ್ಟು ಸಮಾಜಕ್ಕೆ ವಿರೋಧವಾದ ಕೆಲಸ ಮಾಡುವಂತೆ, ತಿಳಿಯಿತು. ರಾತ್ರಿಯೆಲ್ಲ ಅವರಿಗೆ ನಿದ್ರೆ ಬರಲಿಲ್ಲ. ಆದರೆ ನಿರ್ಮಲೆಗೆ ಈ ಕೆಲಸ ನನ್ನಿಂ ವಾಗದು; ಎಂದು ಹೇಳಲಿಕ್ಕೂ ಮನಸ್ಸಾಗಲೊಲ್ಲದು. ಸಾಲವು ತನ್ನಿಂದ ತಾನೇ ಸುಲಭರೀತಿಯಲ್ಲಿ ತೀರುವಾಗ ಯಾರು ಬಿಟ್ಟಾರು? ಕೆಲಸದ ಉದ್ದೇಶವು ಸಾಧ್ಯವಾಗಿದ್ದರೂ ಕೆಲಸಮಾತ್ರ ಶ್ರೇಷ್ಠತರದ್ದು. ನಿರ್ಮಲೆ ಯಂಥ ಸುಸ್ವರೂಪ ತರುಣಿಯೊಡನೆ ಲಗ್ನವಾಗುವದಕ್ಕೆ ಯಾರ ಅಡ್ಡಿಯೂ ಇರಲಿಲ್ಲ. ಇದೇರೀತಿ ವಿಚಾರಿಸುತ್ತ ಕುಳಿತಿದ್ದರು. ಅಷ್ಟರೊಳಗೆ ಸೂಕ್ಷ್ಮ ಕೈಗಳಿಂದ ಬರೆದ ಒಂದು ಪತ್ರವನ್ನು ಒಬ್ಬ ಆಳು ತಂದುಕೊಟ್ಟನು. ಅದನ್ನು ಬಿಚ್ಚಿ ಓದಲಾರಂಭಿಸಿದರು.

ಪ್ರಥಕಾಶ್ರಮ.<br>
ಭಾನುವಾರ ರಾತ್ರಿ ೯ ಘಂಟೆ.

ಶ್ರೀಯುತ... (ಲಗ್ನವಾಗದೆ ಪ್ರಿಯಕರ ಎಂದು ಹೇಗೆ ಬರೆಯಲಿ?) ವೆಂಕಟರಾಯರೇ... ನನ್ನ ಕೆಲಸದ ವಿಷಯದಲ್ಲಿ ನಿಮ್ಮ ಅಭಿಪ್ರಾಯವು ಖಾಯಂ ಇರಬಹುದು. ನನ್ನ ವಿಚಾರವು ಖಂಡಿತವಾಗಿದೆ. ಕೆಲಸ ದೂರ ಸಾಗಬಾರದಾಗಿ ನನ್ನ ಅಭಿಪ್ರಾಯ. 'ಶುಭಂಚಶೀಘ್ರಂ' ಎಂಬ ತತ್ವ ದಂತೆ ನಾನು ನಡೆಯುವವಳು. ನಿನ್ನಿನ ಮಾತಿಗೆ ನಿಮ್ಮ ಒಪ್ಪಿಗೆ ಇದ್ದರೆ, ಸುಮ್ಮನೆ ಕಾಲಹರಣದಿಂದ ಲಾಭವಿಲ್ಲ. ಶೀಘ್ರವಾಗಿ ಸದರೀ ಕಾರ್ಯವನ್ನು

ಮುಗಿಸುವುದೇ ನನ್ನ ಅಭಿಲಾಷೆ, ತಿಳಿಯಿತೇ ? ನಿಮ್ಮ ವಿಚಾರವು ಖಾಯಂ ಆಗಿದ್ದರೆ ಕೂಡಲೆ ಕೆಲಸಕ್ಕೆ ರಾಜೀನಾಮೆ ಕೊಡಿರಿ. ಆದರೆ ನಿಮ್ಮ ಆಫೀಸ್ ಕೆಲಸದ ( ಮಾಹಿತಿ ) ಕ್ರಮವು ನನಗೆ ಗೊತ್ತಿರುವುದಿಲ್ಲ. ಒಮ್ಮಿಂದೊಮ್ಮೆ ರಾಜೀನಾಮೆ ಕೊಟ್ಟರೆ ಒಂದು ತಿಂಗಳ ಸಂಬಳ ಸಿಗಲಿಕ್ಕಿಲ್ಲವೆಂದು ನನಗೆ ತೋರುತ್ತದೆ. ಇಂಥ ಮಹತ್ವದ ಕಾರ್ಯದಲ್ಲಿ ಆ ಐವತ್ತು ರೂಪಾಯಿಯಿಂದ ಏನಾಗಬೇಕಾಗಿದೆ. ಐಶ್ವರ್ಯವು ಆದಷ್ಟು ಬೇಗನೆ ನನ್ನ ವಶಕ್ಕೆ ಬರಬೇಕೆಂಬ ನನ್ನ ಹಾರೈಕೆ. ನಾನು ಮನಸ್ಸುಬಿಚ್ಚಿ ಬರೆಯುತ್ತ ಇದ್ದೇನೆ. ನನ್ನ ಕಾರ್ಯವು ವ್ಯಾಪಾರೀ ದೃಷ್ಟಿಯಿಂದಿರುವುದು. ಅದನ್ನು ನಾನು ಮುಚ್ಚಿಟ್ಟಿರುವುದಿಲ್ಲ. ನಿಮಗೆ ವಿಶದವಾಗಿ ಹೇಳಿಬಿಟ್ಟಿರುತ್ತೇನೆ. ಲಗ್ನದ ವಿಧಿಯು ಕಮಿಾಟಿ ಮಂದಿರದಲ್ಲಿ ಆಗಿದ್ದರೆ ಅರ್ಧತಾಸಿನಲ್ಲಿ ಮುಗಿದು ಹೋಗುತ್ತಿತ್ತು. ಆದರೆ ನಿಮ್ಮ ಇಷ್ಟದ ಪ್ರಕಾರ ಹಳೇಪದ್ಧತಿಯ ರಗಳೆಯ ವಿಧಿಗೆ ಸಹ ನಾನು ಒಪ್ಪಿರುತ್ತೇನೆ. ಎಲ್ಲ ವಿಷಯಗಳೂ ಸರಿಯಾಗಿ ಒಪ್ಪಿಗೆಯಾದ್ದರಿಂದ ಈ ಸಣ್ಣ ವಿಚಾರಕ್ಕೆ ನಿಮ್ಮ ಮನಸ್ಸು ನೋಯಿಸಬಾರದೆಂದು ನಾನು ಒಪ್ಪಿಕೊಂಡೆನು. ನೀವು ಸುಶಿಕ್ಷಿತರಿದ್ದೀರಿ. ಸುಮ್ಮನೆ ಕೆಲಸಕ್ಕೆ ಬಾರದ ಕ್ರಮಗಳನ್ನೆಲ್ಲ ಮಾಡುವುದನ್ನು ಬಿಟ್ಟು, ಶಾಸ್ತ್ರೋಕ್ತವಿಧಿಗಳನ್ನು ಮಾತ್ರ ನೆರವೇರಿಸಲು ಅನುಕೂಲಪಡಿಸುತ್ತೀರಾಗಿ ನಾನು ನಂಬಿರುತ್ತೇನೆ. ಬ್ರಾಹ್ಮಣರು ವಗೈರೆ ಯಾವುದನ್ನೂ ನೀವೇ ನೋಡಿಕೊಳ್ಳಿರಿ. ಮತ್ತು ಒಂದು ಒಂದೂವರೆ ತಾಸಿನಲ್ಲಿ ವಿಧಿಗಗಳೆಲ್ಲವೂ ಮುಗಿಸುವಂತೆ ತಿಳಿಸಿ ಹೇಳಿರಿ. ನನ್ನ ಗೆಳತಿಯರಿಗೆ ನನ್ನ ಅನುಕೂಲದ ವೇಳೆಗೆ ಮೇಜವಾನಿ ಮಾಡಿಸುತ್ತೇನೆ. ನೀವೂ ಕೂಡ ನಿಮ್ಮ ಇಷ್ಟ-ಮಿತ್ರರಿಗೆ ನಿಮ್ಮ ಅನುಕೂಲದಂತೆ ಮೇಜವಾನಿ ಮಾಡಿಸಬಹುದು. ಲಗ್ನದ ದಿವಸ ಹೆಚ್ಚಿಗೆ ಆಡಂಬರದ ಕೆಲಸ ಹಚ್ಚಿಕೊಳ್ಳಬಾರದು. ನಾನು ನಾಳೆ ರಾಧಾಸದನಕ್ಕೆ ಹೋಗಿ, ಮನೆ ಸ್ವಚ್ಛ ಮಾಡಿಸುತ್ತೇನೆ. ನೀವು ನಾಡದು ಮುಹೂರ್ತ ನಿಶ್ಚಯ ಮಾಡಿಕೊಂಡು ಅಲ್ಲಿಗೆ ಬನ್ನಿರಿ. ಸಮಕ್ಷಮ ಸಕಲವೂ ತಿಳಿದೀತು. ಇತಿ. .... ..

ನಿಮ್ಮ, [illegible]

ತಾಜಾಕಲಮ್ - ಚಿಲ್ಲರೆ ಖರ್ಚಿಗೋಸ್ಕರ ಒಂದುನೂರು ರೂಪಾ[illegible] ನೋಟನ್ನು ಲಗತು ಕಳಿಸಿರುತ್ತೇನೆ.

ವೆಂಕಟರಾಯರು ಪತ್ರವನ್ನು ಎರಡು ಮೂರು ಸಾರೆ ಓದಿದರು. ಪತ್ರ ದಲ್ಲಿ ಅವಳು ತನ್ನ ನಿಜವಾದ ಅಭಿಪ್ರಾಯವನ್ನು ಸ್ಪಷ್ಟವಾಗಿ ಬರೆದಿದ್ದಳು. ಅವರು ಪತ್ರವನ್ನು ಮೇಜಿನಮೇಲಿಟ್ಟು ವಿಚಾರ ಮಾಡಲಾರಂಭಿಸಿದರು. ಅವಳು ತನ್ನ ಕಾರ್ಯವು ವ್ಯಾಪಾರೀ ಸಂಬಂಧವಾಗಿರುವುದಾಗಿ ಬರೆದಿರುತ್ತಾಳೆ. ನನ್ನ ಕಾರ್ಯವೂ ವ್ಯಾಪಾರೀ ಸಂಬಂಧವಲ್ಲವೇನು? ಕಾರಣ ಅವಳಿಗೇಕೆ ಬೆಸರಿಡಬೇಕು. ಇಬ್ಬರ ಭಾಗದಲ್ಲಿಯೂ ಈ ಕೆಲಸವು ಯೋಗ್ಯವಲ್ಲ ವೇನು ?

ಪುನಃ ಪತ್ರವನ್ನು ತೆಗೆದುಕೊಂಡು ಓದಿ, ( ಮನಸ್ಸಿನಲ್ಲಿಯೇ ) ಪತ್ರ ದೊಳಗಿನ ಪ್ರತಿಯೊಂದು ಶಬ್ದವೂ ಆಕೆಯ ಬುದ್ಧಿಯನ್ನು ತೋರಿಸುತ್ತದೆ. ಆದರೆ ಅವಳ ಅಂತಃಕರಣವು ಹೇಗಿರಬಹುದು ? ಅದರಿಂದ ನನಗೇನು? ಲಗ್ನವನ್ನು ಆದಷ್ಟು ಬೇಗನೆ ಮುಗಿಸಬೇಕೆಂಬ ಆತುರವು ಅವಳಿಗಿದ್ದಂತೆ ತೋರುತ್ತದೆ. ದಿವಸಗಳು ಹೆಚ್ಚಾದರೆ ನನ್ನ ಆಲೋಚನೆಯಲ್ಲಿ ಬದಲಾವಣೆ ಯಾಗಬಹುದೆಂದು ಅವಳಿಗೆ ಅನುಮಾನ ಬರಬಹುದು. ಈಗಲೇ ಜೋಯಿ ಸರಹತ್ತಿರಹೋಗಿ, ವಿಚಾರಿಸಿ, ಮುಹೂರ್ತವನ್ನು ಕೂಡಲೆ ತಿಳಿಸಿಬಿಡುತ್ತೇನೆ.

ವೆಂಕಟರಾಯರು ಉಡುಪನ್ನು ಧರಿಸಿದರು. ಆದರೆ ಹೊರಗೆ ಹೋಗು ವುದರೊಳಗೆ ತನ್ನ ವಿಚಾರವು ಖಾಯಂ ಇರುವುದಾಗಿ ಅವಳಿಗೆ ಒಂದು ಪತ್ರ ವನ್ನು ಕಳಿಸಬೇಕೆಂದು ಮನಸ್ಸಿಗೆ ಬಂತು. ಕಾರಣ ಪತ್ರ ಬರೆಯಲು ಕೂತರು.

ಅನ್ನಪೂರ್ಣಾಗೃಹ.
ಸೋಮವಾರ ಬೆಳಿಗ್ಗೆ ೧೦ ಘಂಟೆ.

ಪ್ರಿಯೆ — ( ಈ ಪತ್ರದಲ್ಲಿ ನನ್ನ ಸಮ್ಮತಿ ಬರೆಯುತ್ತಿರುವುದರಿಂದ [illegible] ಬರೆಯಬಹುದು. )

[illegible] ಮುದ್ದು ಕೈಗಳಿಂದ ಬರೆದ ಪತ್ರ ತಲ್ಪಿತು. ನನ್ನ ಆಲೋಚನೆಯೂ [illegible] ಆಗಿರುವುದು. ನಿಮ್ಮ ಸೂಚನೆಯ ಮೇರೆಗೆ ಈ ದಿನವೇ ಕೆಲಸಕ್ಕೆ [illegible]ವು ಕೊಡುತ್ತೇನೆ. ಹಳೇ ಪದ್ಧತಿಗಳನ್ನು ನಡಿಸಬೇಕೆಂದು ನನ್ನ [illegible]ವೇನೂ ಇಲ್ಲ. ಅವುಗಳು ಪುರುಷರಿಗಿಂತ ಸ್ತ್ರೀಯರಿಗೆ ಹೆಚ್ಚು

ಪುಚ್ಛತಕ್ಕವುಗಳಾಗಿವೆ. ಕಾರಣ ಅವುಗಳನ್ನು ನೀವು ಬೇಕಾದಹಾಗೆ ಮಾಡಿ ಬಹುದು. ಶಾಸ್ತ್ರೋಕ್ತ ಕೆಲಸಗಳು ಮಾತ್ರ ನಡೆದರೆ ನನಗೆ ಸಾಕು. ನೀವು ಬರೆದಂತೆ ಎಲ್ಲ ಕೆಲಸಗಳನ್ನೂ ಮುಗಿಸಿ, ನಾಳೆ ಸಾಯಂಕಾಲ ಐದು ಘಂಟೆಗೆ ನ್ಯಾಯಾಸದನಕ್ಕೆ ನಿಮ್ಮ ಭೇಟಿಗೆ ಬರುತ್ತೇನೆ

ತಮ್ಮ,

**ವೆಂಕಟರಾವ್.**

ತಾ|| ಕಾಗದದ ಜೊತೆಗೆ ನೀವು ಕಳಿಸಿದ ನೂರು ರೂಪಾಯಿಯ ನೋಟು ಕಳ್ಸಿದೆ

ಪತ್ರವನ್ನು ಲಕೋಟೆಯಲ್ಲಿ ತುಂಬಿದಕೂಡಲೇ ಸುಬ್ರಾಯನ್‌ರ ಭೇಟಿ ತೆಗೆದುಕೊಂಡು ಇವತ್ತಿನಿಂದ ತನ್ನನ್ನು ಬಿಡುಗಡೆಮಾಡಲು ಕೇಳಿಕೊಂಡರು. ವೆಂಕಟರಾಯರ ಈ ಮಾತನ್ನು ಕೇಳಿ ಅವರಿಗೆ ಆಶ್ಚರ್ಯವಾಯಿತು.

ವೆಂಕಟರಾಯರು ಒಳ್ಳೇ ಚತುರರಿದ್ದು ಕೆಲಸದಲ್ಲಿ ಗಟ್ಟಿಗರಿದ್ದರು. ಸುಬ್ರಾಯನ್‌ರಿಗೆ ಆಫೀಸನ್ನು ಪುನಃ ನೋಡುವ ಸಂಭವವೇ ಇರಲಿಲ್ಲ. ಕಾರಣ ವೆಂಕಟರಾಯರನ್ನು ಬಿಟ್ಟುಕೊಡಲು ಅವರಿಗೆ ಇಷ್ಟವಿರಲಿಲ್ಲ.

**ಸುಬ್ರಾಯನ್** — ನೀವು ಸಂಬಳದ ದೆಸೆಯಿಂದ ಕೆಲಸ ಬಿಡುವುದಾದರೆ ಮುಂದಿನ ತಿಂಗಳಿಂದ ಇನ್ನು ಐದು ರೂಪಾಯಿ ಜಾಸ್ತಿಕೊಡುತ್ತೇನೆ. ಈ ವಿಷಯ ನಿಮಗೆ ನಾನು ಮೊದಲೇ ತಿಳಿಸತಕ್ಕವನಿದ್ದೆನು. ಆದರೆ ನೀವು ಹೀಗೆ ಆತುರಪಡುವಿರೆಂದು ನನಗೆ ತಿಳಿದಿರಲಿಲ್ಲ.

**ವೆಂಕಟರಾವ್**:— (ಕಂಪಿತಸ್ವರದಿಂದ) ಸಂಬಳಕ್ಕೋಸ್ಕರ ನಾನು ಕೆಲಸ ಬಿಡುವುದಿಲ್ಲ.

**ಸುಬ್ರಾಯನ್** :— ಹಾಗಾದರೆ ಯಾತಕ್ಕೋಸ್ಕರ? (ನಗುತ್ತ ನಗುತ್ತ) ಯಾವುದಾದರೂ ಸಂಸ್ಥಾನದಿಂದ ಮುನಸಫಿ ಕೆಲಸಕ್ಕೆ ಆಹ್ವಾನ ಬಂದಿರುವುದೇನು?

**ವೆಂಕಟರಾವ್**:— ಮುನಶೀಫರ ಕೆಲಸ ನನಗೆ ಹ್ಯಾಗೆ ಸಿಕ್ಕೀತು ಎಂದು ನಿರಾಶೆಯಿಂದ ಹೇಳಿದರು. )

**ಸುಬ್ರಾಯನ್**:— ಸ್ವತಂತ್ರರೀತಿಯಿಂದ ವಕೀಲಿ ನಡಿಸುವಿರೋ ಹೇಗೆ ?

**ವೆಂಕಟರಾವ್**:— ಛೀ ! ಅದು ಬಡವರ ಜೀವಡಿಯೋ, ಸರಿ !

**ಸುಬ್ರಾಯನ್**:— ಹಾಗಾದರೆ ಮುಂದೇನು ಮಾಡುವಿರಿ ?

**ವೆಂಕಟರಾವ್**:— **ಯಾವುದನ್ನೂ** ನಿಶ್ಚಯಿಸಿರುವುದಿಲ್ಲ. ಆದರೆ ನನ್ನ ಪ್ರಕೃತಿಯು ಬಹಳ ಕೆಟ್ಟದ್ದರಿಂದ ಕೆಲಸ ಬಿಡಬೇಕಾಗಿದೆ.

**ಸುಬ್ರಾಯನ್**:— ಹಾಗಾದರೆ ಹೀಗೆ ಮಾಡಿರಿ. ಆ ವೃತ್ತಪತ್ರದ ಕೆಲಸವನ್ನೆಲ್ಲ ಪೂರೈಸಿ ಹೋಗಿರಿ. ಅದರ ಕೆಲಸಗಳೆಲ್ಲವೂ ಬಹುಶಃ ನಿಮ್ಮ ಕೈಯಿಂದಲೇ ನಡೆದಿವೆ. ಬೇಗನೆ ಅದರ ಕೆಲಸ ಪೂರೈಸಿಬಿಡಿ, ಅಂದರೆ ಒಂದುರಗಳೆ ಹರಿದಂತಾಗುಯಿತು.

ಇದಕ್ಕೆ ವೆಂಕಟರಾಯರು ಯಾವಮಾತನ್ನೂ ಆಡಲಿಲ್ಲ.

**ಸುಬ್ರಾಯನ್**.— ಶನಿವಾರ ದಿವಸ ವೃತ್ತಪತ್ರದ ನಕಲನ್ನು ತೆಗೆದುಕೊಂಡು ನಿರ್ಮಲೆಯ ಹತ್ತಿರ ಹೋಗಿದ್ದಿಲ್ಲ; ಅದು ಏನಾಯ್ತು ? ಆಗ ನೀವು ಹೋದವರು ಪುನಃ ಬರಲೇ ಇಲ್ಲ ! ಅವಳು ಏನು ಹೇಳುತ್ತಾಳೆ ? ಕಾಗದ ಪತ್ರಗಳನ್ನು ಓದಿಕೊಂಡಳೋ ಹ್ಯಾಗೆ?

ವೆಂಕಟರಾಯರು ಸ್ತಬ್ಧರಾಗಿ ನಿಂತಿದ್ದರು. ನಿರ್ಮಲೆಯ ಹೆಸರನ್ನು ಕೇಳಿದೊಡನೆ ಸ್ವಲ್ಪ ನಾಚಿಕೆಯುಂಟಾಯಿತು.

ಸುಬ್ರಾಯನ್‌ರು ಈಚಿಯ ( ಆಧುನಿಕ ) ಹೊಸನಮೂನೆಯ ವಕೀಲರಾಗಿದ್ದು ತುಂಬಾ ಚತುರರಿದ್ದರು. (ವೆಂಕಟರಾಯರನ್ನು ನೋಡಿ)

ಹಾಗಾದರೆ ಆಕೆಯ ವಿಚಾರವೇನಿರುವುದು ? ಲಗ್ನ ಮಾಡಿಕೊಳ್ಳುತ್ತೀನೆನ್ನುವಳೋ ಇಲ್ಲವೋ ?

**ವೆಂಕಟರಾವ್**:— ಕಾಗದವನ್ನು ಓದಿದಳು. ಅದರಲ್ಲಿ ಅನುಮಾನ ಬಂದ ಒಂದೆರಡು ಪ್ರಶ್ನೆಗಳನ್ನು ಕೇಳಿ, ತಿಳಿದುಕೊಂಡಳು.

**ಸುಬ್ರಾಯನ್**:— ಆದರೆ ಲಗ್ನದ ವಿಚಾರ ಏನು ಹೇಳಿದಳು ? ( ಬೇಕೆಂತ ಈ ಪ್ರಶ್ನೆಯನ್ನು ಕೇಳಿದರು.)....

ವೆಂಕಟರಾಯರು ಏನೂ ಹೇಳಲಿಲ್ಲ. ನಿರ್ಮಲೆಯು ಲಗ್ನದ ವಿಚಾರ ಕೇಳಿದೊಡನೆ ವೆಂಕಟರಾಯರು ಸ್ವಲ್ಪಗಾಬರಿಯಾದದ್ದನ್ನು ಸುಬ್ರಾಯನ್‌ರು ನೋಡಿದರು. ಒಮ್ಮಿಂದೊಮ್ಮೆ ಇವರು ಕೆಲಸಬಿಡಲು ಆಕೆಯ ಲಗ್ನಕ್ಕೂ ಇವರಿಗೂ ಸಂಬಂಧವಿರುವಂತೆ ಅವರಿಗೆ ಅನುಮಾನ ಬಂದು, ಹೀಗೆ ಹೇಳಿದರು.

**ಸುಬ್ರಾಯನ್**.— ಲಗ್ನದ ವಿಚಾರವಾಗಿ ಅವಳು ಏನೂ ಹೇಳದಿದ್ದ ಪಕ್ಷದಲ್ಲಿ ಈ ದಿನ ಹೋಗಿ ವಿಚಾರಿಸಿಕೊಂಡು ಬನ್ನಿರಿ, ಲಗ್ನ ಮಾಡಿಕೊಳ್ಳಲು ಆಕೆಗೆ ಇಷ್ಟವಿಲ್ಲದಿದ್ದರೆ ಆಸ್ತಿ ವಹಿವಾಟ ಮಾಡಲು ಒಬ್ಬ ಅಧಿಕಾರಿಯನ್ನು ನೇಮಿಸಬೇಕಾಗುವದು. ಈ ದಿನ ಬೇಗ್ಗೆ ವಿಶ್ವಾಸರಾಯರು ಬಂದು, ಕೂಡ್ಲೇ ಈ ಕೆಲಸ ಪರಿಹರಿಸಬೇಕಾಗಿ ಹೇಳಿ ಹೋದರು.

**ವೆಂಕಟರಾವ್** :— ಅವಳ ಮಾತಿನ ಮೇಲಿಂದ ಆಸ್ತಿಯನ್ನು ಪಂಚರು ನೋಡಿಕೊಳ್ಳುವ ಪ್ರಸಂಗ ಬರುವಂತೆ ತೋರುವುದಿಲ್ಲ!

**ಸುಬ್ರಾಯನ್** :— ಹಾಗಾದರೆ ಆಕೆಯ ಲಗ್ನ ನಿಶ್ಚಯವಾಗಿರುವುದೇನು ?

**ವೆಂಕಟರಾವ್**:— ಹೌದು, ಅವಳು ನನಗೆ ಮುಹೂರ್ತ ನೋಡಲು ತಿಳಿಸಿರುತ್ತಾಳೆ. ಲಗ್ನದ ಸಂಬಂಧವಾದ ಎಲ್ಲ ಸಂಗತಿಯನ್ನು ವೆಂಕಟರಾಯರು ಸುಬ್ರಾಯನ್‌ರಿಗೆ ತಿಳಿಸಿ ಹೇಳಲು, ಅವರು ಅದನ್ನು ಕೇಳಿ ಬಹಳ ಸಂತೋಷಪಟ್ಟರು.

ಇವರಿಬ್ಬರ ಮಾತು ಕಥೆಯ ಸ್ವಲ್ಪ ಸ್ವಲ್ಪ ಭಾಗವನ್ನು ಆಫೀಸಿನಲ್ಲಿದ್ದ ಇತರ ಗುಮಾಸ್ತರು ಕೇಳಿಕೊಂಡಿದ್ದರು. ವೆಂಕಟರಾಯರು ಹೋಗುವಾಗ " ರಾಯರೇ ಹುಷಾರ! ಮಹಾವಿದ್ಯಾಲಯದಲ್ಲಿ ಓದಿದ ಹುಡಿಗಿ ಗಂಟು ಬಿದ್ದಳು " !! ಎಂದು ತಮಾಷೆ ಮಾಡಿದರು.

ಗುಮಾಸ್ತರು ಹೇಳಿದ್ದನ್ನು ಕೇಳಿ ವೆಂಕಟರಾಯರಿಗೆ ಆಶ್ಚರ್ಯವಾಯಿತು. ಲಗ್ನದ ವಿಚಾರದಲ್ಲಿ ಮಾಡಿದ ಚೇಷ್ಟೆಗಳಿಗೆ ಯಾರೂ ಸಿಟ್ಟು ಮಾಡುವದಿಲ್ಲ. ಅದರಂತೆ ಅವರದನ್ನು ಸ್ವೀಕರಿಸಿ ಅಗತ್ಯವಾಗಿ ಲಗ್ನಕ್ಕೆ ಬರುವಂತೆ ಕೇಳಿಕೊಂಡರು. ಮತ್ತು ಆಫೀಸಿನ ಹೊರಗೆ ನಿಂತ ಸಿಪಾಯಿಗೆ ನಾಲ್ಕಾಣೆ ಇನಾಮಾಗಿ ಕೊಟ್ಟರು. ಇಲ್ಲಿಂದಲೇ ವೆಂಕಟರಾಯರ ನಸೀಬ

ವೆಂಕಟರಾಯರಿಗೆ ತುಂಬಾ ನಗೆ ಬಂದು ನಗಲಾರಂಭಿಸಿದರು. ಹ್ಯಾಗೆ ಐಶ್ವರ್ಯ ಸಿಕ್ಕುವುದು? ಎಲ್ಲಿಯೂ ಲಾಟರಿ ವಗೈರೆ ಕೂಡಾ ಹಾಕಿರಲಿಲ್ಲ!

**ಶಾಸ್ತ್ರಿಗಳು:**— (ಸಿಟ್ಟಿನಿಂದ) ನಿಶ್ಚಯವಾಗಿಯೂ ಐಶ್ವರ್ಯಯೋಗ ಇದೆ. ಯಾಕೆ ನಗುತ್ತೀರಿ?

**ವೆಂಕಟರಾವ್.** ಅದು ಇರಲಿ ಬಿಡಿ. ಸಿಗುವದಾಗಿದ್ದರೆ ಸಿಕ್ಕೀತು. ಇನ್ನು ಒಂದು ವರ್ಷಕ್ಕೆ ಏನಾದರೂ ಗಂಡಾಂತರವಿರುವುದೋ ಹೇಗೆ? ನೋಡಿರಿ. ಶಾಸ್ತ್ರಿಗಳು ಪುನಃ ಗುಣಿಸಿ ಎಲ್ಲಿಯ ಗಂಡಾಂತರ! ನೋಡಿ ನಲವತ್ತೈದು ವರ್ಷ ಇದೆ. ಎಂದು ಜಾತಕವನ್ನು ತೋರಿಸಿದರು.

**ವೆಂಕಟರಾವ್** — ಹಾಗೇನಾದರೂ ಗಂಡಾಂತರವಿದ್ದರೆ ಹೇಳಿ, ಸಂಕೋಚ ಮಾಡಬೇಡಿರಿ, ನೋಡಿರಿ; ಕಾಮತ ಡಾಕ್ಟರರಲ್ಲಿ ಒಂದು ಆಲೋಚನೆ ಮಾಡಿರುತ್ತೇನೆ ಸರಿಯಾಗಿ ನೋಡಿ.

ಕಾಮತ ಡಾಕ್ಟರರ ಹೆಸರು ಹೇಳಿದ್ದರಿಂದ ಜೋಯಿಸರು ಪುನಃ ಮಾತಾಡದೆ, ಕಪ್ಪು ಹಲಗೆಯ ಮೇಲೆ ಗಣಿತ ಮಾಡಲು ಪ್ರಾರಂಭಿಸಿ, ಸರಿಯಾಗಿ ಲೆಕ್ಕ ಹಾಕಿ, ಹೀಗೆ ಹೇಳಿದರು. ಯಾವ ಡಾಕ್ಟರರೇ ಬರಲಿ ನಿಮಗೆ ನಲವತ್ತೈದು ವರ್ಷದವರೆಗೆ ಯಾವ ಕಂಟಕವೂ ಇಲ್ಲವಾದ್ದರಿಂದ ನೀವು ಭಯಪಡುವ ಕಾರಣವಿಲ್ಲ. ಕಾಮತರು ದೊಡ್ಡ ವೈದ್ಯರು; ನಿಜ. ನಮ್ಮ ವಿದ್ಯೆಯು ಕಡಮೆಯಿಲ್ಲ! ಇದು ಗಣಿತವಿದ್ಯೆಯು. ಹಾಗಾದರೆ ಎಷ್ಟೋ ಸಹಸ್ರ ವರ್ಷಗಳಿಂದ ನಡೆದುಬಂದ ಈ ವಿದ್ಯೆಯು ಸುಳ್ಳುವಿದ್ಯೆಯೇ? **ನಾವು ಪಂಚಾಂಗ ಹೇಳುವುದರಲ್ಲಿ ಪ್ರವೀಣರು! ನಾನು ನಿಮಗೆ ಖಂಡಿತ ಹೇಳುತ್ತೇನೆ. ಒಂದು ವರ್ಷದೊಳಗೆ ಏನಾದರೂ ಕಂಟಕ ಬಂದರೆ ನಾನು ಇನ್ನು ಮೇಲೆ ಪಂಚಾಂಗ ಹೇಳುವುದನ್ನೇ ಬಿಟ್ಟು ಬಿಡುವೆನು!!**

ಶಾಸ್ತ್ರಿಗಳು ಈ ರೀತಿ ಖಂಡಿತ ಹೇಳಿದ ಮಾತನ್ನು ವೆಂಕಟರಾಯರು ಕೇಳಿ, ತಮ್ಮ ಪ್ರಕೃತಿಯು ಇನ್ನು ಸುಧಾರಿಸಬಹುದಾಗಿ ತಿಳಿದರು. ಮತ್ತು ಶಾಸ್ತ್ರಿಗಳು ಭವಿಷ್ಯ ಹೇಳುವವರಲ್ಲಿ ಪ್ರವೀಣರೆಂದು ನಂಬಿಕೆ ಇತ್ತು. ಕಾರಣ ಅವರ ಮನಸ್ಸಿನಲ್ಲಿ ಒಂದು ತರದ ಆನಂದವು ಉತ್ಪನ್ನವಾಯಿತು.

ತನ್ನ ಹೇಳಿಕೆಯಲ್ಲಿ ವೆಂಕಟರಾಯರಿಗೆ ಇನ್ನೂ ನಂಬಿಕೆ ಹುಟ್ಟಲಿಲ್ಲ ವೆಂದು ತಿಳಿದು; ಏನು? ನಿಮ್ಮ ಸಂಶಯವು ಹೋಗಲಿಲ್ಲವೇ? ಎಂದು ಹೇಳಿ, ಪುನಃ ಜಾತಕವನ್ನು ನೋಡಿ, ಸ್ವಲ್ಪಹೊತ್ತು ಗಣಿತಹಾಕಿ; ರಾಯರೇ "ಮುಂದಿನವರ್ಷ ನಿಮಗೆ ಪುತ್ರಲಾಭವಾಗುವುದು" ತಿಳಿಯಿತೋ?

**ವೆಂಕಟರಾವ್.** (ಆಶ್ಚರ್ಯದಿಂದ) ಏನು? ಪುತ್ರಲಾಭವೇ? (ವೆಂಕಟರಾಯರು ಲಗ್ನದ ಮುಹೂರ್ತವನ್ನು ಕೇಳಲು ಹೋದವರು ಏನೇನೋ ಪ್ರಶ್ನೆಗಳು ಹೊರಟಿನ್ನ. ಮತ್ತು ವೆಂಕಟರಾಯರಿಗೆ ಕೆಲಸದ ಆತುರವೂ ಬಹಳವಿತ್ತು. ಕಾರಣ ಅವರು ನಗುತ್ತ) ಸಮಸ್ತ ಜಾತಕದಲ್ಲಿ ಲಗ್ನ ಬಲವು ಯಾವಾಗಿದೆ. ನೋಡಿರಿ!

**ಶಾಸ್ತ್ರಿಗಳು:—** ಹಾಗಾದರೆ ಲಗ್ನವು ನಿಶ್ಚಯವಾಗಿರುವುದೇನು?

**ವೆಂಕಟರಾವ್ :** ಹೌದು, ಅದಕ್ಕೋಸ್ಕರವೇ ಮುಹೂರ್ತ ಕೇಳುವುದು?

**ಶಾಸ್ತ್ರಿಗಳು:—** ಹಸನ್ಮುಖರಾಗಿ ಈಗಲಾದರೂ ಖಾತ್ರಿಯಾಯಿತೇ? ಎಂದು ಹೇಳಿ; ಹುಡುಗಿಯ ಜಾತಕವೆಲ್ಲಿರುವುದು?

**ವೆಂಕಟರಾವ್.** ಹುಡುಗಿಯ ಜಾತಕವಿಲ್ಲ.

**ಶಾಸ್ತ್ರಿಗಳು:—** ಮುಹೂರ್ತ ಕೇಳಲು ನನ್ನಲ್ಲಿ ಏಕೆ ಬಂದಿರಿ?

**ವೆಂಕಟರಾವ್:—** ಪಂಚಾಂಗದಲ್ಲಿ ಬರೆದಿರುವುದಿಲ್ಲವೇ? ಹೋಗಲಿ. ನನ್ನ ಜಾತಕಕ್ಕೆ ಅನುಕೂಲವಾದ ಮುಹೂರ್ತವನ್ನಾದರೂ ಹೇಳಿರಿ.

**ಶಾಸ್ತ್ರಿಗಳು** ಪಂಚಾಂಗ ನೋಡಿ, ಶುಕ್ರವಾರ 'ವಾರ ಶುದ್ಧಿ' ಇರುವುದೆಂದು ಹೇಳಿದರು.

ಶಾಸ್ತ್ರಿಗಳಿಗೆ ಎದುರೂಪಾಯಿ ಕೊಟ್ಟು, ವೆಂಕಟರಾಯರು ಅಲ್ಲಿಂದ ಒಂದು ಗಾಡಿ ಮಾಡಿಕೊಂಡು, ಒಟ್ಟೆಯ ಅಂಗಡಿಗೆ ಹೋಗಿ, ತಮ್ಮ ಸಲುವಾಗಿ ಬೇಕಾದ ಉಡುಪನ್ನು ತೆಗೆದುಕೊಂಡರು. ಮತ್ತು ಲಗ್ನಕ್ಕೆ ಅವಶ್ಯಕವಿರುವ ಕೆಲವು ಸಣ್ಣ-ಪುಟ್ಟ ಸಾಮಾನುಗಳನ್ನು ಕೊಂಡು, ಸಾಯಂಕಾಲ ತಮ್ಮ ಗೃಹಕ್ಕೆ ಬಂದರು

# ೧೪ನೆಯ ಪರಿಚ್ಛೇದ.

## ಸಂಪೂರ್ಣ ನಿರ್ಧಾರ.

ವೆಂಕಟರಾಯರು ತಮ್ಮ ಬಿಡಾರಕ್ಕೆ ಬಂದಮೇಲೆ ಏನೂ ಕೆಲಸವಿಲ್ಲದ್ದರಿಂದ ಅವರಿಗೆ ಬಹಳ ಬೇಜಾರಾಗಹತ್ತಿತು. ನಾಳೆ ಸಾಯಂಕಾಲದ ಐದು ಘಂಟೆ ಯಾವಾಗ ಆದೀತೆಂದು ಹಾತೊರೆಯುತ್ತಿದ್ದರು. ಹಾಗೂ ಹೀಗೂ ಮಾಡಿ ರಾತ್ರಿ ಕಳೆದರು. ಬೆಳಗಾಯಿತು. ಐದುಘಂಟೆ ಎಷ್ಟು ಹೊತ್ತಿಗೆ ಆದೀತು? ನಿರ್ಮಲೆಯನ್ನು ಯಾವಾಗ ಕಂಡೇನೆಂಬ ಉತ್ಸಾಹವು ಹೆಚ್ಚಿತು. ಮೂರೂವರೆ ಘಂಟೆಗೆ ಅವರು ರೇಲ್ವೆಸ್ಟೇಶನ್ನಿಗೆ ಹೋಗಿ ಕುಳಿತುಕೊಂಡರು. ಇನ್ನೂ ಗಾಡಿ ಹೊರಡಲು ಅರ್ಧತಾಸು ಬೇಕಾಗಿತ್ತು. ಕೆಲಹೊತ್ತಿನಲ್ಲಿ ಗಾಡಿಬಂದು ತಲ್ಪಿ, ಅವರು ಹೊರಟು ನಾಲ್ಕೂಮುಕ್ಕಾಲಿಗೆ ರಾಧಾಸದನಕ್ಕೆ ತಲ್ಪಿದರು. ನಿರ್ಮಲೆಯು ಹೊರಗಿನ ಅಂಗಳದಲ್ಲಿ ತಿರುಗಾಡುತ್ತಿದ್ದಳು. ಅವಳು ವೆಂಕಟರಾಯರ ದಾರಿಯನ್ನೇ ನೋಡುತ್ತಿದ್ದಳೆಂದು ಹೇಳಲಿಕ್ಕೆ ಬರುವಂತಿರಲಿಲ್ಲ. ಏಕೆಂದರೆ ಅವಳ ಮುಖದಲ್ಲಿ ಖಿನ್ನತೆಯು ತೋರುತ್ತಲಿತ್ತು. ವೆಂಕಟರಾಯರ ಸಮ್ಮತಿ ಪತ್ರ ಬಂದಮೇಲೆ ಅವಳಿಗೆ ಸಂತೋಷವಾಗಬೇಕಾಗಿತ್ತು. ಆದರೆ ಅವಳ ಮುಖವನ್ನು ನೋಡಿದರೆ ಹಾಗೆ ಕಾಣುತ್ತಿರಲಿಲ್ಲ. ಅವಳಿಗೆ ಸದಸದ್ವಿವೇಕ ಬುದ್ಧಿ ಹುಟ್ಟಿರಬಹುದೇ? ಯಾರೇ ಆಗಲಿ, ಒಂದು ಕೆಲಸವನ್ನು ಹಟದಿಂದ ಮಾಡುತ್ತಲಿದ್ದರೆ ಅದು ಮುಗಿಯುವವರೆಗೆ ಅಥವಾ ಮುಗಿಯುತ್ತದೆಂದು ನಂಬಿಕೆಯಾಗುವವರೆಗೆ ಅವನಿಗೆ ಅದರ ಗುಣ-ದೋಷಗಳು ತಿಳಿಯುವುದಿಲ್ಲ. ಆಗ ಅವನು ತನ್ನ ಅಹಂಭಾವದಿಂದ ಕುರುಡನಾಗಿಹೋಗಿರುತ್ತಾನೆ ಕೆಲಸವು ಪೂರೈಸಿದ ನಂತರ ಅದರ ಸಂಬಂಧ ಅಭಿಮಾನವು ಕಡಿಮೆಯಾಗುತ್ತದೆ. ಆಮೇಲೆ ಕಾರ್ಯಾಕಾರ್ಯವಿವೇಚನೆಯು ಬರುತ್ತದೆ. ಆಗ ಅವನಿಗೆ ಪಶ್ಚಾತ್ತಾಪವುಂಟಾಗುವದು. ಹೀಗೆಯೇ ನಿರ್ಮಲೆಗೂ ಆಗಿರಬಹುದೇ? ಅವಳ ಯೋಚನೆಯ ಅಭದ್ರತೆಯು ಅವಳ ಮನಸ್ಸಿಗೆ ಬಂದಿರಲಿಕ್ಕಿಲ್ಲವೆ? ಹೀಗಿದ್ದರೂ ಅವಳು ವೆಂಕಟರಾಯರನ್ನು ಆದರದಿಂದ ಸ್ವಾಗತ ಮಾಡಿದಳು.

ಆದರೆ ನಿತ್ಯದಂತೆ ಅವಳು ಸಂತೋಷವಾಗಿರಲಿಲ್ಲವೆಂಬುವದು ವೆಂಕಟರಾಯರಿಗೆ ತಿಳಿಯಿತು.

ಬಹಳ ಹೊತ್ತಿನವರೆಗೆ ಅವಳು ಏನೂ ಮಾತಾಡಲಿಲ್ಲ. ಆಗ ವೆಂಕಟರಾಯರೇ ಮಾತಾಡಲು ಪ್ರಾರಂಭಿಸಿದರು.

**ವೆಂಕಟರಾವ್**:---ಮುಹೂರ್ತವನ್ನು ಶುಕ್ರವಾರಕ್ಕಿಟ್ಟಿದೆ ಸರಿಯಾಯಿತಲ್ಲವೇ ? ಎರಡೇ ದಿವಸವಿರುವುದು.

**ನಿರ್ಮಲೆ**.— (ಹುಬ್ಬುವಿಂಸಿ) ಸರಿ, **ಒಳ್ಳೇದಾಯಿತು.**

**ವೆಂಕಟರಾವ್**.— ಹಾಗಾದರೆ ಕೆಲಸಕ್ಕೆ ಪ್ರಾರಂಭಿಸಬಹುದಲ್ಲ ?

**ನಿರ್ಮಲೆ** — ಕೆಲಸ, ಕೆಲಸ ಅಂದರೆ ಎಂಥಾ ಕೆಲಸ, ಹೇಳಿರಿ; ನೋಡುವಾ ? ಮನೆಯನ್ನು ಉಡುಗಿಸಿ ಸಾರಿಸಿರುತ್ತದೆ.

**ವೆಂಕಟರಾವ್**.— ಅವಳ ಮನಸ್ಸಿನ ಅಂತರಂಗವನ್ನು ತಿಳಿಯಲು 'ಲಗ್ನಪತ್ರಿಕೆಗಳನ್ನು ಛಾಪಿಸಲು ಹೇಳಿ ಕಳಿಸಬಹುದೇ' ? ಎಂದುಕೇಳಿದರು.

ಅವಳು ಬೇರೆ ಕಡೆಗೆ ನೋಡಲಾರಂಭಿಸಿದಳು.

ನಿರ್ಮಲೆಯು ಮಾತಾಡದಿರುವುದನ್ನು ನೋಡಿ, ಅವಳು ತನ್ನ ಆಲೋಚನೆ ಬದಲಿಸಿರಬಹುದೆಂದು ತಿಳಿದು ವೆಂಕಟರಾಯರು ಗಾಬರಿಯಾದರು.

**ವೆಂಕಟರಾವ್**:—( ಸ್ವಲ್ಪ ಅವಕಾಶದಿಂದ ) ನೀವು ಸಿದಾನವಾಗಿ ಪುನಃ ಆಲೋಚಿಸಬಹುದು ? ಆತುರದಿಂದ ಫಲವಿಲ್ಲ? ಕೆಲಸ ನಡೆದ ನಂತರ ಪಶ್ಚಾತ್ತಾಪಪಡುವುದು ಒಳ್ಳೆಯದಲ್ಲ. ಈಗಲೇ ಚೆನ್ನಾಗಿ ಮನಸ್ಸು ಸ್ಥಿರಮಾಡಿರಿ.

**ನಿರ್ಮಲೆ**:— ನಾನು ಆಳವಾಗಿ ಆಲೋಚಿಸಿರುವೆನು.

**ವೆಂಕಟರಾವ್** :— ಸಂಪೂರ್ಣ ವಿಚಾರ ಮಾಡಿರುವಿರಾ ? ಸರಿಯಾದ ವಿಚಾರದಲ್ಲಿಯೇ ಈ ವಿಷಯವು ನಿರ್ಭರವಾಗಿರುವುದಲ್ಲವೇ ? ಸಾಧಕ ಬಾಧಕ ವಿಚಾರ ಮಾಡಿರುವಿರಲ್ಲವೇ ? ನೀವು ಚಿಕ್ಕವರಿರುತ್ತೀರಿ; ತರುಣರಲ್ಲಿ ಮುಂದಿನ ಕಾಲದ ಕಡೆ ಲಕ್ಷವಿರುವುದು ಕಡಿಮೆ. ಆದಕಾರಣವೇ ಈ ವಿಷಯದಲ್ಲಿ ನೀವು ಶಾಂತಚಿತ್ತದಿಂದ ಆಲೋಚಿಸಿರುತ್ತೀರಾ ?

**ವೆಂಕಟರಾವ್**:— ಹೂಂ! ಎಂದು ತಲೆಯಲ್ಲಾಡಿಸಿದರು. (ನಿರ್ಮಲೆಯನ್ನು ನೋಡಿ,) ವಧೂವರರ ಸಮ್ಮತಿಯಿಂದ ಸಂಸಾರಕ್ಕೆ ಅನುಕೂಲವಾಗಲು ಅಸಮರ್ಥವಾದ ಈ ವ್ಯಾಪಾರೀ ಲಗ್ನದಲ್ಲಿ ಉೞಿದಕಾರ್ಯಗಳೂ ವ್ಯಾಪಾರೀ ನೇಮದಲ್ಲಿ ನಡೆಯುವುದೇನು ಆಶ್ಚರ್ಯವು ?

**ನಿರ್ಮಲೆ**:— ನೀವು ಹೇಳುವುದು ನಿಜ. ( ವಿಷಯವನ್ನು ಬದಲಿಸಿ) ಉದಕಮಂಡಲಕ್ಕೆ (ನೀಲಗಿರಿಗೆ) ಹೋಗುವ ಎಲ್ಲಸಿದ್ಧತೆಗಳು ತಯಾರಾದವಲ್ಲವೇ. ?

ಬೇಸಗೆಕಾಲವನ್ನು ಉದಕಮಂಡಲದಲ್ಲಿ ಕಳೆಯಬೇಕೆಂದು ನಿರ್ಮಲೆಯು ನಿಶ್ಚಯಿಸಿದ್ದಳು. ಮೂರನೇದಿನ ಅವರಿಬ್ಬರೂ ನೀಲಗಿರಿಗೆ ಪ್ರಯಾಣ ಮಾಡಿದರು.

ವೆಂಕಟರಾಯರು ಮೊದಲೇ ಕಾಗದ ಬರೆದು ಒಂದು ಬಂಗಲೆಯನ್ನು ಇಡಿಸಿದ್ದರು. ಮತ್ತು ನೌಕರರ ಅನುಕೂಲತೆಯನ್ನುಮಾಡಿದ್ದರು.

ನೀಲಗಿರಿಯಲ್ಲಿರುವಾಗ ಒಂದು ದಿನ ಬಂಗಲೆ ಮುಂಭಾಗದ ಕಟ್ಟೆಯ ಮೇಲೆ ಇಬ್ಬರೂ ಮಾತಾಡುತ್ತ ಕುಳಿತಿದ್ದರು.

**ನಿರ್ಮಲೆ** :— ಪ್ರವಾಸದಲ್ಲಿ ನಿಮ್ಮಂಥ ಸಂಗಡಿಗರು ಮನುಷ್ಯರು ಸಿಗುವುದು ಅಪೂರ್ವ ! ಈ ವಿಷಯಕ್ಕೆ ನಿಮ್ಮನ್ನು ನಾನು ಬಹಳ ಒಳ್ಳೆಯವರೆಂದು ಭಾವಿಸುತ್ತೇನೆ !!

ಈ ಸ್ಥಿತಿಯು ವೆಂಕಟರಾಯರ ಮನಸ್ಸಿಗೆ ಬಂದಿರಲಿಕ್ಕಿಲ್ಲ.

**ವೆಂಕಟರಾವ್**:— ನನ್ನಲ್ಲಿ ಅಂಥದೇನಿರುವದು ? ನನಗಿಂತಲೂ ಚುರುಕಾಗಿರುವವರು ನೂರಾರುಜನರು ಸಿಗಬಹುದಲ್ಲ !

**ನಿರ್ಮಲೆ**:— ಪರಿಸ್ಥಿತಿ ವಿಚಾರಮಾಡಿದಲ್ಲಿ ಎಲ್ಲಾ ಭಾಗದಲ್ಲಿ ನೀವೇ ಯೋಗ್ಯರಿರುತ್ತೀರಿ.

**ವೆಂಕಟರಾವ್**:—(ತನ್ನ ಪ್ರಕೃತಿಯ ವಿಚಾರವನ್ನುತಿಳಿದು ಇವಳು ಹೀಗೆ ಹೇಳುತ್ತಿರಬಹುದೆಂದು ಅವರಿಗೆ ಸಂಶಯಬಂದಿತು. ಅದುದರಿಂದ ) ಅದೇನು ? ಎಂದು ಆತುರದಿಂದ ಕೇಳಿದರು.

**ನಿರ್ಮಲೆ**.— ನಿಮಗೆ ಗೊತ್ತಾಗಲಿಲ್ಲವೇನು ?

ಅವಳ ಮಾತಿನ ಅರ್ಥವು ವೆಂಕಟರಾಯರಿಗೆ ತಿಳಿಯಿತು. ಕರಾರೆ ಆಗುವ ಮೊದಲು ಅವಳ ಸೌಂದರ್ಯಕ್ಕೆ ವೆಂಕಟರಾಯರು ಮರುಳಾಗಿದ್ದರೆಂಬುದು ಅವಳಿಗೆ ಗೊತ್ತಿತ್ತು. ಆದಕಾರಣ ಅವಳಹತ್ತಿರ ಹೋ....ಹೋ.... ಎಂದು ನಗುತ್ತಾ ಸುಮ್ಮನಾದರು.

ನಿರ್ಮಲೆಗೆ ವೆಂಕಟರಾಯರ ಮೇಲೆ ಪ್ರೀತಿಯು ಉತ್ಪನ್ನವಾಗಿ ದೃಢವಾಗಿತ್ತು. ಅವಳು ಮಾನವಂತೆ, ಮತ್ತು ಲಹರಿಯವಳೂ ಆಗಿದ್ದಳು. ಅವಳ ಇಷ್ಟದಂತೆ ನಡೆಯುವುದಕ್ಕೆ ವೆಂಕಟರಾಯರಿಗೆ ಆನಂದವಾಗುತ್ತಿತ್ತು. ಇದು ಅವಳ ಲಾವಣ್ಯದ ಪರಿಣಾಮವು. ಕರಾರಿನಿಂದ ಬಂದ ವಿಶೇಷ ಸಂಬಂಧದ ಪರಿಣಾಮ ಅಥವಾ ಅವಳ ಮನಸ್ಸಿನಂತೆ ಅನುಸರಿಸಿ ಕರಾರನ್ನು ನಾಶಪಡಿಸುವುದಕ್ಕೋಸ್ಕರ ಹೀಗೆ ಮಾಡುವರು ಎಂದು ಹೇಳಲಿಕ್ಕೂ ಬರುವಂತೆ ಇರಲಿಲ್ಲ. ಆದರೆ ನಿರ್ಮಲೆಯು ಹೇಳಿದ ಪ್ರತಿಯೊಂದು ಮಾತನ್ನೂ ಉತ್ಸಾಹದಿಂದಲೂ ಚಟುವಟಿಕೆಯಿಂದಲೂ ನಡಿಸುತ್ತಿದ್ದರು. ಆದರೂ ಅವರ ಕೆಲಸಕ್ಕೋಸ್ಕರ ನಿರ್ಮಲೆಯು ಆಗಾಗ ಮುಖವನ್ನು ಕೆಂಪಗೆ ಮಾಡುತ್ತಿದ್ದಳು. ಒಂದೊಂದುಸಾರೆ ನಿರ್ಮಲೆಯು ನೀವು ಯಾವ ಕೆಲಸವನ್ನೂ ಮನಸಿಟ್ಟು ಮಾಡುವದಿಲ್ಲವೆಂದು ಹೇಳುವಳು. ....

ಒಂದುದಿನ ಇಬ್ಬರೂ ಆನಂದದಿಂದ ಮಾತಾಡುತ್ತ ಕೂತಿದ್ದರು.

**ವೆಂಕಟರಾವ್**:— ಹಾಗೆ ಮಾಡಿದರೆ ಹ್ಯಾಗಾದೀತು? ನಾನು ಹಾಗೆ ಮಾಡಿದರೆ ನೀನು ಹೀಗೆ ಹೇಳುತ್ತಾ ಬಾ. ....

**ನಿರ್ಮಲೆ**:— ನೀವು ಮುದ್ದಾಂ ಹಾಗೆ ಮಾಡುತ್ತೀರೆಂದು ನಾನು ಹೇಳಲಿಲ್ಲ. ಹಾಗಿಲ್ಲದಿದ್ದರೂ ಬಹಳಸಾರೆ ನಿಮ್ಮ ಲಕ್ಷ್ಯವು ಕೆಲಸದಕಡೆ ಇಲ್ಲದಿರುವುದನ್ನು ನಾನು ನೋಡಿರುವೆನು; ಔಷಧವನ್ನು ನೇಮದಪ್ರಕಾರ ತೆಗೆದುಕೊಳ್ಳುತ್ತೀರಲ್ಲವೆ?

**ವೆಂಕಟರಾವ್**:—ಮನಸ್ಸು ನಿಮ್ಮಕಡೆ ಇದ್ದಮೇಲೆ ಕೆಲಸಮಾಡಲು ಉತ್ಸಾಹವೆಲ್ಲಿರಬೇಕು?

**ನಿರ್ಮಲೆ**:— ಸುಳ್ಳು-ಬದ್ದ ಹೇಳಬೇಡಿರಿ.

**ವೆಂಕಟರಾವ್**:— ಔಷಧಿಯನ್ನು ನೇಮವಾಗಿ ತೆಗೆದುಕೊಳ್ಳುತ್ತೇನೆ..

ವೆಂಟಕರಾಯರ ಮಾತಿನ ಅರ್ಥವನ್ನು ತಿಳಿದು, ಅವಳು ಜಾಕೀಟು ತರುವ ನೆವದಿಂದ ತನ್ನ ಕೋಣೆಗೆ ಹೋದಳು. ಸಂಭಾಷಣೆಯು ಅಲ್ಲಿಗೇ ನಿಂತುಬಿಟ್ಟಿತು. ...

ವರ್ಷದಲ್ಲಿ ಹನ್ನೊಂದು ತಿಂಗಳು ಕೆಲಸಮಾಡಿ ದಣಿದ ವಕೀಲರು, ಬ್ಯಾರಿಸ್ಟರು, ವಿದ್ಯಾಲಯದ ಅಧ್ಯಾಪಕರು, ದೊಡ್ಡದೊಡ್ಡ ಸೇಟ ಸಾಹುಕಾರರೂ, ತಂಪುಹವಾ ತೆಗೆದುಕೊಳ್ಳಲು ಮೇ ತಿಂಗಳಲ್ಲಿ ಉದಕಮಂಡಲಿಕ್ಕೆ ಹೋಗುತ್ತಾರೆ. ಶ್ರೀಮಂತ ಸುಶಿಜನರ ಸಮೂಹವು ಆ ಕಾಲಕ್ಕೆ ಬಹಳ ಸೇರುವುದು. ಎಷ್ಟೋ ಜನರು ಕುಟುಂಬ ಪರಿವಾರ ಸಹಿತ ಹೋಗಿರುತ್ತಾರೆ. ಈಗ ಸೇರಿದವರಲ್ಲಿ ಎಷ್ಟೋಜನ ಮದ್ರಾಸಿನವರು ನಿರ್ಮಲೆಯ ಸ್ನೇಹಿತರಿದ್ದರು. ಅವರೊಡನೆ ವನಭೋಜನ ನಡಿಸುವದು, ಸಮೀಪದ ತಿರುಗಾಟ ಮಾಡುವದು, ಇದರಲ್ಲಿ ನಿರ್ಮಲೆಗೆ ಹೊತ್ತುಹೋಗುತ್ತಿತ್ತು. ಈ ಸಮಯಗಳಲ್ಲಿ ವೆಂಕಟರಾಯರು ಕಾಣುತ್ತಿರಲಿಲ್ಲ. ಅವರಿಗೆ ಇದರಲ್ಲಿ ಇಷ್ಟವಿರಲಿಲ್ಲವೆಂದಲ್ಲ. ತನ್ನ ಗೆಳತಿಯರಗೆಳೆಯರ ಜೊತೆಯ ಆನಂದದಲ್ಲಿ ವೆಂಕಟರಾಯರ ನೆನಪೇ ಅವಳಿಗೆ ಬರುತ್ತಿರಲಿಲ್ಲ. ಅವರು ಆಹ್ವಾನವಿಲ್ಲದೆ ಅಲ್ಲಿಗೆ ಹೋಗಲು ಇಷ್ಟಪಡುತ್ತಿದ್ದಿಲ್ಲ. ಅದ್ದರಿಂದ **ಮನೆಕಾಯುತ್ತ ಕೊಡ್ರುವದೇ ಅವರ ಕೆಲಸವಾಗಿತ್ತು** !

ಪ್ರತಿದಿವಸವೂ ನಡೆಯುವ ಈ ಹೊಸ ಪ್ರವೃತ್ತಿಗಳು ವೆಂಕಟರಾಯರಿಗೆ ಸರಿಬರಲಿಲ್ಲ. ಏನೇ ಆಗಲಿ ಮೊದಮೊದಲು ಸಂಭಾಷಣೆಮಾಡಲು ಅನುಕೂಲವಿರುತ್ತಿತ್ತು. ಈಚಿಗೆ ಅದೂ ತಪ್ಪಿಹೋಯಿತು. ಅದರಿಂದ ಅವರಿಗೆ ತುಂಬಾ ವ್ಯಸನವಾಯಿತು.



# ೧೬ ನೆಯ ಪರಿಚ್ಛೇದ.



## ಏನಾದರೂ ಸುಮಾರೇ! (ಚೆನ್ನಾಗಿಲ್ಲ.)

ಬೆಳಗಿನ ಏಳು ಘಂಟೆಯ ಸಮಯ. ವೆಂಕಟರಾಯರು ಡ್ರೆಸ್ ಮಾಡುತ್ತಿದ್ದರು. ಈ ದಿನ ಅವರ ನಸೀಬು ತೆರೆದಂತೆ ತೋರುತ್ತಿತ್ತು. ಜೊತೆಗೆ ತಿರುಗಾಡಲು ಬರಬೇಕೆಂದು ನಿನ್ನಿನ ದಿವಸವೇ ನಿರ್ಮಲೆಯು ಹೇಳಿದ್ದಳು. ಈ ದಿನ ಅವರು ಪದೇ ಪದೇ ಕನ್ನಡಿಯಲ್ಲಿ ತಮ್ಮ ದೇಹವನ್ನು ನೋಡಿಕೊಳ್ಳುತ್ತಿದ್ದರು. ಅವರಿಗೆ ಸೀಟಾದ ಡ್ರೆಸ್ ಮಾಡುವ ಮನಸ್ಸಿರಲಿಲ್ಲ. ಆದರೂ ಹೆಂಡತಿಯೊಡನೆ ಹೋಗಬೇಕಾದ್ದರಿಂದ ಹಾಗೆ ಮಾಡಬೇಕಾಗಿತ್ತು. ಯಾಕೆಂದರೆ ಪ್ರತಿಯೊಬ್ಬರು ತಮ್ಮ ಹೆಂಡರ ವಿಚಾರ ಮನಸ್ಸಿನಲ್ಲಿ ಬಂದರೆ ಉಡುಪಿನ ಕಡೆ ಸ್ವಲ್ಪ ಲಕ್ಷ್ಯಕೊಟ್ಟೇ ಇರುತ್ತಾರೆ.

ಉಡುಪನ್ನು ಧರಿಸುವಾಗ ಏನೋ ಗುಣಗುಣು ಎಂದು ಪದ ಹೇಳುತ್ತಿದ್ದರು. ಗೋವಿಂದಸ್ವಾಮಿ ನಾಟಕವು ನೀಲಗಿರಿಗೆ ಮೊನ್ನೆ ತಾನೆ ಬಂದಾಗ ಅವರು ಹೋಗಿದ್ದರು. ಅದರೊಳಗಿನ ಒಂದು ಪದವು ಬಹಳ ಚೆನ್ನಾಗಿತ್ತು. ಅದನ್ನು ಸ್ತ್ರೀ-ಪುರುಷರೆಲ್ಲರೂ ಕೇಳಿ ಕಲಿತಿದ್ದರು. ಪದಹೇಳುತ್ತಿರುವಾಗ ಕನ್ನಡಿ ನೋಡಿ, ಓಹೋ! ಮುಖದ ಮೇಲೆ ಒಂದು ತರದ ತೇಜ ತೋರುತ್ತದೆ! ಇದು ಮರಣದ ಚಿನ್ಹೆ ಇರಲಿಕ್ಕಿಲ್ಲವಲ್ಲವೇ!!

ಈ ವಿಷಯ ಈ ದಿವಸವೇ ಅವರ ಮನಸ್ಸಿನಲ್ಲಿ ಬಂದಿರುವುದೆಂದು ಹೇಳಲಿಕ್ಕಾಗದು. ಆಗಾಗ ಈ ವಿಷಯ ಮನಸ್ಸಿನಲ್ಲಿ ಬರುವುದು ಮತ್ತು ಅದನ್ನು ಮರೆಸಿ ಬಿಡುವರು. ಮತ್ತು ಲಗ್ನದ ಕರಾರು ಅವರೆದುರಿಗೆ ಬಂದು ನಿಂತಂತೆ ತೋರುವುದು. ಆದರೂ ಪದೇ ಪದೇ ಆ ವಿಷಯವು ಅವರ ಮನಸ್ಸಿನಲ್ಲಿ ಬಂದೇ ಬರುವುದು. ಮತ್ತು ಆ ವಿಚಾರ ಬಂದೊಡನೆ ಮೈಯಲ್ಲಿ ಒಂದುತರದ ಶಕ್ತಿ ಬಂದಂತೆ ತೋರುವುದು. ಪುನಃ ಕನ್ನಡಿಯಲ್ಲಿ ನೋಡುವರು. ಮತ್ತು ಕಾಮತ ಡಾಕ್ಟರರ ಪರೀಕ್ಷೆಯು ಎಂದಿಗೂ ಸುಳ್ಳಾಗಲಾರದು. ಹಾಗಿದ್ದರೂ ಇದೇನು? ದೀಪವು ಹೋಗುವ ಮೊದಲು ದೊಡ್ಡದಾಗುತ್ತದಂತೆ! ಅದರಂತೆ ಇದೂ ಆಗಿರಬಹುದಲ್ಲವೇ?

ಹೀಗೆ ವಿಚಾರಮಾಡುತ್ತ ಹೊರಗೆ ಜಗಲಿಯಮೇಲೆ ಬಂದರು. ಉಡುಪನ್ನು ಧರಿಸುವಾಗ ಯಾವ ಪದವನ್ನು ಹೇಳುತ್ತಿದ್ದರೋ ಅದೇ ಪದವನ್ನು ನಿರ್ಮಲೆಯೂ ಹೇಳುತ್ತಿದ್ದಳು. ಅವಳು ಅನ್ನುವ ಪದವನ್ನು ಕೇಳಿದೊಡನೆ ವೆಂಕಟರಾಯರಿಗೆ ರೋಮಾಂಚನಗಳು ಬಂದವು! ಶೃಂಗಾರ ಲಹರಿಯ ಪದವು. ತರುಣಿಯ ಕೋಮಲ ಸ್ವರದಿಂದ ಕಿವಿಗೆ ಬಿದ್ದರೆ ಗಂಡಸರ ಸ್ಥಿತಿಯು ಯಾವರೀತಿಯಾಗುವುದೆಂಬುದನ್ನು ಬಾಯಿಂದ ಹೇಳಲಾಗುವುದಿಲ್ಲ ಅದನ್ನು ಅನುಭವದಿಂದಲೇ ತಿಳಿಯಬೇಕು!! ವೆಂಕಟರಾಯರಿಗೆ ಅದರ ಅನುಭವವು ಬಾರದಿರಲಿಲ್ಲ. ನಿರ್ಮಲೆಯು ಸ್ವಲ್ಪ ಸವಿಯನ್ನು ಹಾಡ ತೊಡಗಿದಳು, ಅವಳ ಸ್ವರವು ಏರಿಳಿಯುತ್ತಿತ್ತು. ಈ ಸಂಗೀತ ಲಹರಿಯಲ್ಲಿ ವೆಂಕಟರಾಯರು ನಿರ್ಮಲೆಯ ಕೋಣೆಯ ಬಾಗಿಲ ಬಳಿಯ ಕಟ್ಟೆಯ ಮೇಲೆ ಬಂದು ನಿಂತುಬಿಟ್ಟರು.

ಈಗ ಒಳಗೆ ಹೋಗಬೇಕೋ " ಬೇಡವೋ " ಎಂದು ವಿಚಾರ ಮಾಡಲು ಅವರು ಪ್ರಾರಂಭಿಸಿದರು. ಇದುವರೆಗೆ ಅವರು ಆ ಕೋಣೆಯಲ್ಲಿ ಹೋಗಿರಲಿಲ್ಲ. ಕಳ್ಳನಂತೆ ಹೋಗಲು ಅವಕಾಶವೂ ಇರಲಿಲ್ಲ. ಆದರೂ ಧೈರ್ಯದಿಂದ ಒಳಗೆ ಹೋಗಿ, ಒಂದು ಕಡೆ ನಿಂತುಕೊಂಡರು. ಕೋಣೆಯೊಳಗಿನ ಅಲಂಕಾರವನ್ನು ನೋಡಿ, ತನ್ನ ಮತ್ತು ಈ ಕೋಣೆಯ ಕಲ್ಪನೆಯನ್ನು ಮನಸ್ಸಿನಲ್ಲಿ ನೆನೆದು, ಅವರಿಗೆ ತುಂಬಾ ವ್ಯಸನವಾಯಿತು. ಅವರ ಕೋಣೆಯಲ್ಲಿ ಮೇಜು, ಕುರ್ಚಿ, ಪಲಂಗ, ಬೀರು, ಪರದೆ ಇವುಗಳು ಇರಲಿಲ್ಲ. ವೆಂಕಟರಾಯರು ಒಳಗೆ ಬಂದಾಗ ಅವಳು ಸೀರೆಯನ್ನು ಉಡುತ್ತಿದ್ದಳು. ಮತ್ತು ಕನ್ನಡಿಯಲ್ಲಿ ನೋಡಿ ಸುಕ್ಕುಬಿದ್ದ ಕಡೆ ತಿದ್ದಿ ಸರಿಪಡಿಸುತ್ತಿದ್ದಳು. ಅವಳಿಗೆ ಡ್ರೆಸ್ ಮಾಡುವುದರಲ್ಲಿಯೇ ಲಕ್ಷ್ಯವು ಪೂರ್ಣವಿತ್ತು. ಕಾರಣ ಅವಳು ಬಹಳ ಹೊತ್ತು ಅವರನ್ನು ನೋಡಲಿಲ್ಲ. ನೋಡಿದೊಡನೆ ಹೀಗೇಕೆ ನಿಂತಿರುವಿರಿ! ಕುರ್ಚಿಯ ಮೇಲೆ ಕೂತುಕೊಳ್ಳಿರಿ; ದಯವಿಟ್ಟು ಆ ಬಾಗಿಲನ್ನು ತೆರೆಯಿರಿ, ನೋಡೋಣ.?

ಅವರು ಬಾಗಿಲವನ್ನು ತೆರೆದು ಖುರ್ಚಿಯ ಮೇಲೆ ಕೂತರು.

**ನಿರ್ಮಲೆ:** — ಈ ಸೀರೆಯು ಚೆನ್ನಾಗಿರುವುದಲ್ಲವೆ? ಹಸಿರು ಬಣ್ಣವು ನನಗೆ ಬಹಳ ಮೆಚ್ಚುತ್ತದೆ!

**ನಿರ್ಮಲೆ:**— ವೆಂಕಟರಾವ್ (ಎಂದು ಸ್ವಲ್ಪಹೊತ್ತು ಏಕದೃಷ್ಟಿಯಿಂದ ನೋಡಹತ್ತಿದಳು.)

**ವೆಂಕಟರಾವ್:**— ನಿರ್ಮಲೆ! ಪ್ರಮಾದವೇನಾಯ್ತು.? (ಎಂದು ಪ್ರೀತಿಯಿಂದ ನುಡಿದರು.)

**ನಿರ್ಮಲೆ:**— ಆದರೂ ಕಠಾರು, ನಾನು ಹುಚ್ಚಳೆಂದೇ ನಿಮ್ಮ ಮಾತಿಗೆ ಮರುಳಾದೆನು. ಮೊದಲೇ ತಪ್ಪಿದೆನು. ಗಂಡಸರೆಲ್ಲರೂ ಒಂದೇ! ನಾನು ಸಂಪೂರ್ಣಹುಚ್ಚಳು. ನನ್ನನ್ನು ಬಿಡಿರಿ.

**ವೆಂಕಟರಾವ್:**— ಛೇ........ಹೇಗೆ ಬಿಡುವುದು.? ಒಂದಾದರೂ ಪ್ರೇಮದ....... ಚುಂಬನ ತೆಗೆದುಕೊಂಡವಿನಹ . .

**ನಿರ್ಮಲೆ:**— ಸಿಟ್ಟಿನಿಂದ ಅವರ ಕಡೆನೋಡಿ) (ಛೇ! ಅದು ಹೇಗಾದೀತು? ನನ್ನನ್ನು ಬಿಡಿ, ಎಂದು ಸ್ವಲ್ಪ ಜಗ್ಗಿದಳು.

ಆದರೆ ಅದರಿಂದ ಉಪಯೋಗವೇನು? ವೆಂಕಟರಾಯರು ಗಟ್ಟಿಯಾಗಿ ಕೂದಲನ್ನು ಹಿಡಿದಿದ್ದರು.

ಅವಳ ಲಕ್ಷವು ವೆಂಕಟರಾಯರ ಕೈಗಳಕಡೆ ಹೋಯಿತು. ಕ್ಷಯ ರೋಗದ ಮನುಷ್ಯರಂತೆ ಕೈಗಳಲ್ಲಿ ಎಲುವು ಚರ್ಮದರೂಪು ಕಾಣುತ್ತಿರಲಿಲ್ಲ. ಕೈಗಳು ಪುಷ್ಟವಾಗಿ ತೋರಿದುವು. ಈ ಸ್ಥಿತಿಯನ್ನು ನೋಡಿದೊಡನೆ ಅವಳಿಗೆ ವಿಲಕ್ಷಣವಾಗಿತೋರಿತು. ಅವಳು ಹೆದರಿ ಬಿಡಿಸಿಕೊಳ್ಳುವ ಪ್ರಯತ್ನ ಮಾಡದೆ ಗೊಂಬೆಯಂತೆ ಸುಮ್ಮನೆ ನಿಂತಳು. ದೇವರೇ, ಇದೇನು ಕಠಿಣ-ಪ್ರಸಂಗ! ಎಂದು ಗೊಣಗುಟ್ಟಿದಳು.

ವಿಚಾರವಂತ ನಿರ್ಮಲೆಯು ಈಗ ತಂಬಾ ಪತಿವಶಳಾಗಿದ್ದಳು. ಆದರ ಉಪಯೋಗವನ್ನು ವೆಂಕಟರಾಯರು ಮಾಡಿಕೊಳ್ಳದೆ ಬಿಡಲಿಲ್ಲ. (ಕೂಡಲೆ ಅವಳ ಚುಂಬನವನ್ನು ತೆಗೆದುಕೊಂಡರು. ಒಂದುಸಾರೆ, ಎರಡುಸಾರೆ, ಇಲ್ಲವೆ ಹಲವುಸಾರೆ ಎನ್ನಿರಿ.)....

ನಿರ್ಮಲೆಯ ಸ್ಥಿತಿಯು ಯಾವರೀತಿಯಾಗಿರಬಹುದೆಂಬದನ್ನು ವಾಚಕರೇ ಊಹಿಸಲಿ.

ಸ್ತ್ರೀಯರ ಸ್ವಾತಂತ್ರ್ಯದಹುಚ್ಚು ಅವಳ ತಲೆಯಲ್ಲಿ ಸೇರಿದ್ದರಿಂದ ಲಗ್ನದವಿಚಾರದಲ್ಲಿ ಅವಳ ಆಲೋಚನೆ ಬಹಳ ಮುಂದೆ ಸಾಗಿತ್ತು. ಆದರೂ ಲಗ್ನವಾದಮೇಲೆ ಅದರ ನಿಯಮಗಳನ್ನು ಪಾಲಿಸಲೇಬೇಕೆಂಬುದು ಅವಳಿಗೆ ತಿಳಿದಿತ್ತು. ಮತ್ತು ಸ್ವಾಭಾವಿಕವಾದ ಈ ಬಂಧನಗಳಿಂದ ತನ್ನ ಸ್ವಾತಂತ್ರ್ಯವು ಕಡಿಮೆಯಾಗುವುದೆಂದು ಅವಳು ತಿಳಿದಿದ್ದಳು. ಇಷ್ಟಕ್ಕೋಸ್ಕರವೇ ಲಗ್ನವಾಗುವುದಿಲ್ಲವೆಂದು ಅವಳ ಹಟವಿತ್ತು. ಕರಾರ್ ಆದ ಒಡನೆ ಅವಳ ಬಾಯಿಂದ, 'ಹಾಳು, ಎಂಥ ಸ್ವಾತಂತ್ರ್ಯ'ವೆಂಬಶಬ್ದವು ಹೊರಟದ್ದವು. ನಿಜವಾದ ಸ್ವಾತಂತ್ರ್ಯವೂ ಅವಳಿಗೆ ತಿಳಿದಿತ್ತು. ಐಶ್ವರ್ಯವನ್ನು ಸಂಪಾದಿಸುವ ಸಲುವಾಗಿ ಈ ತರದ ಲಗ್ನವಾಗಬೇಕಾಗಿತ್ತು. ಸ್ವತಂತ್ರತೆ ಎಂದರೆ ಸ್ವೇಚ್ಛಾಚಾರವೆಂದು ಅವಳು ತಿಳಿದಿರಲಿಲ್ಲ. ಈ ರೀತಿ ಪ್ರಸಂಗಬಂದದ್ದು ಅವಳಿಗೆ ಇದೇ ಮೊದಲು.

**ನಿರ್ಮಲೆ:**— ( ದುಃಖದ ನಿಟ್ಟುಸುರನ್ನು ಬಿಟ್ಟಳು. ಸ್ವರವೂ ಕುಗ್ಗಿ ಹೋಯಿತು. ) ಹೀಗೆಮಾಡಲು ನಿಮಗೆ ಹಕ್ಕೆಲ್ಲಿರುವುದು?

ವೆಂಕಟರಾಯರಿಗೂ ಇಂಥ ಪ್ರಸಂಗಬಂದದ್ದು ಇದೇ ಮೊದಲನೆಯದಾಗಿತ್ತು. ನಿರ್ಮಲೆಯು ಈ ಸಂದರ್ಭದಲ್ಲಿ ಅವರ ವಶದಲ್ಲಿದ್ದಳು. ನಿಜವಾಗಿಯೂ ಅವಳು ಅವರವಳೇ ಆಗಿದ್ದಳು. ಆದರೂ ಅವರ ದೇಹವೆಲ್ಲಾ ನಡುಗಿ ಹೋಗಿತ್ತು.

**ವೆಂಕಟರಾವ್:**— (ಅದು ನನ್ನ ನಿಜವಾದ ಹಕ್ಕಾಗಿರುವುದು. ನಗೆಮೊಗದಿಂದ ನಿರ್ಮಲೆಯ ಕಿವಿಗೆ ಬಾಯಿಹಚ್ಚಿ) ನೀನು ದೇವರ ಮತ್ತು ಬ್ರಾಹ್ಮಣರ ಸಮಕ್ಷಮ ಹೂವಿನಹಾರವನ್ನು ಹಾಕಲಿಲ್ಲವೇ?

ಅಷ್ಟರೊಳಗೆ ಅವರಿಗೆ ಬೇರೇ ವಿಚಾರವು ಬಂದಿತು. ಅವರಿಗೆ ನಾಚಿಕೆಯು ಉತ್ಪನ್ನವಾಯಿತೆಂದು ಅನ್ನಿರಿ. ಅಥವಾ ಸದ್ವಿವೇಕವು ಉತ್ಪನ್ನವಾಯಿತೆಂದು ತಿಳಿಯಿರಿ. ಅವಳನ್ನು ಜುಲುಮೆಯಿಂದ ಹಿಡಿದಿರುವುದು ಮನಸ್ಸಿಗೆ ಬರಲಿಲ್ಲವಾದ್ದರಿಂದ ಕೈಬಿಟ್ಟು ಕನ್ನಡಿಯಲ್ಲಿ ತಮ್ಮ ವರ್ಚಸ್ಸನ್ನು ನೋಡಲಾರಂಭಿಸಿದರು.

ಅವರ ಕೈ ತಪ್ಪಿದೊಡನೆ ನಿರ್ಮಲೆಯು ಬೇರೆ ಖುರ್ಚಿಯಮೇಲೆ ಹೋಗಿಕುಳಿತಳು. ಆದರೆ ಅಳುತ್ತ ಕುಳಿತಿರಲಿಲ್ಲ. ಅವಳು ಅಳುವಂಥ ಹೆಂಗಸಾಗಿರಲಿಲ್ಲ. ಖುರ್ಚಿಯಮೇಲೆಯೇ ಕುಳಿತುಕೊಂಡು ವೆಂಕಟ ರಾಯರನ್ನು ಒಂದೇಸಮನೆ ದುರುಗುಟ್ಟಿ ನೋಡುತ್ತಿದ್ದಳು. ಮತ್ತು ನಡು ನಡುವೆ ತುಟಿಯನ್ನು ಕಚ್ಚುತ್ತಿದ್ದಳು. ಸಾಮಾನ್ಯ ಸ್ತ್ರೀಯರಂತೆ ಬೆರಳನ್ನು ಮುರಿಯುತ್ತಿರಲಿಲ್ಲ.

**ನಿರ್ಮಲೆ.**— ( ಸಿಟ್ಟಿನಿಂದ ) **ಏನಾದರೂ ಸುಮಾರೇ ! (ಚೆನ್ನಾಗಿಲ್ಲ.) ನಿಮ್ಮ ನಡತೆಗೆ ಧಿಕ್ಕಾರವಿರಲಿ !! ನಡೆಯಿರಿ ಇಲ್ಲಿಂದ; ಬೇಗನೇ ಹೊರಟುಹೋಗಿರಿ !!!** . .. .... ....

ವೆಂಕಟರಾಯರು ಹೊರಟೇಹೋದರು.

---

## ೧೭ನೆಯ ಪರಿಚ್ಛೇದ.

### ದೈವ ತೆರೆಯಿತು.

ಕೂಡಲೆ ವೆಂಕಟರಾಯರು ತಮ್ಮ ಕೋಣೆಯಲ್ಲಿ ಬಂದು ಕೂತರು. ಮತ್ತು ಮದರಾಸಿಗೆ ಹೋಗಿ ತಮ್ಮ ಪ್ರಕೃತಿಯನ್ನು ಕಾಮತರಿಗೆ ತೋರಿಸ ಬೇಕೆಂದು ಯೋಚಿಸಿದರು. ಡಾಕ್ಟರರ ಅಭಿಪ್ರಾಯವು ಮೊದಲಿನಂತೆ ಇದ್ದರೆ ಇವತ್ತಿನ ಹಾಗೆ ಮೇಲಿಂದ ಮೇಲೆ ಪ್ರಸಂಗಗಳು ಬರಲಿಕ್ಕಿಲ್ಲವೆಂದು ಅವರಿಗೆ ತಿಳಿಯಿತು. ಮೇಲೇ ಕಾಣುತ್ತದೆ? ಸಾಯಲು ತಯಾರಾದ ಮನು ಷ್ಯನಿಗೆ ಹೆಂಗಸರು ಯಾತಕ್ಕೆ? ಡಾಕ್ಟರರ ಅಭಿಪ್ರಾಯವು ಮೊದಲಿನಂತೆಯೇ ಈಗ ಸಹ ಇದ್ದುದಾದರೆ ಈಗ ಉಂಟಾದ ಕಾರ್ಯಕ್ಕೆ ನಾನು ನಿರ್ಮಲೆಯಲ್ಲಿ ಕ್ಷಮೆ ಬೇಡುವೆನು. ಮತ್ತು ಹಿಂದಾದ ಕಾರ್ಯಗಳನ್ನು ಮರೆತು ಕ್ಷಮಿಸಬೇಕಾಗಿ ಹೇಳಿಕೊಳ್ಳುವೆನು. ಎಂಬ ವಿಚಾರಗಳು ಅವರ ಮನಸ್ಸಿನಲ್ಲಿ ಸುತ್ತಾಡು ತ್ತಿದ್ದವು.

ಅಷ್ಟರಲ್ಲಿ ಊಟಕ್ಕೆ ಆದ ಸಂಗತಿಯನ್ನು ಆಳು ಬಂದು ತಿಳಿಸಿದನು. ಇಬ್ಬರೂ ಮಾತಾಡುತ್ತ ಊಟಮಾಡುವ ಪದ್ಧತಿ ಇತ್ತು. ಈ ದಿನ ಆ ಪದ್ಧತಿಯು ಎಲ್ಲಿ ಮುರಿಯುವುದೋ ಎಂಬ ಭೀತಿಯು ಇಬ್ಬರಿಗೂ ಉಂಟಾಗಿತ್ತು. ಆದರೆ ಜಗಳವಾದದ್ದನ್ನು ಆಳುಗಳಿಗೆ ತಿಳಿಸಬಾರದೆಂದೋ ಅಥವಾ ಸಮಾಧಾನವಾದ್ದರಿಂದಲೋ ಊಟದ ಹೊತ್ತಿಗೆ ಸರಿಯಾಗಿ ಇಬ್ಬರೂ ಕೂಡಿಯೇ ಬಂದರು! ತಮ್ಮಲ್ಲಿ ಜಗಳವಾದದ್ದನ್ನು ಅವರು ಹೊರಗೆ ತೋರಿಸಲಿಲ್ಲ. ಊಟಮಾಡಬೇಕಾದರೆ ನಿತ್ಯದಂತೆ ಹರಟೆ ಮಾತುಗಳು ಹೊರಡಲಿಲ್ಲ. ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನೇ ಇದ್ದರು. ಕೊನೆಗೆ ನಿರ್ಮಲೆಯೇ ಗೊಜ್ಜಿನ ವಿಷಯವಾಗಿ ಹೊಗಳಿದಳು. ವೆಂಕಟರಾಯರು ಸಾರಿನ ವಿಷಯವಾಗಿ ಮಾತುಕತೆಗೆಂದು ಮಾತಾಡಲು ಪ್ರಾರಂಭಿಸಿದರು. ಹಾಗೂ ಹೀಗೂ ಕೆಲವು ಮಾತುಗಳಾದವು. ಆದರೆ ನಿತ್ಯದಂತೆ ಮನಬಿಚ್ಚಿ ಒಬ್ಬರೂ ಮಾತಾಡಲಿಲ್ಲ.

ಊಟವಾದಮೇಲೆ ವೆಂಕಟರಾಯರು ತಮ್ಮ ಕೋಣೆಗೆ ಹೋಗಿ ಕೂತರು. ಪುನಹ ಕಾಮತ ಡಾಕ್ಟರರ ಅಭಿಪ್ರಾಯ ಕೇಳುವ ಆಲೋಚನೆ ಬಂತು. ಕೊನೆಗೆ ನಾಳೆ ದಿವಸ ಹೊರಡುವ ಆಲೋಚನೆ ಮಾಡಿದರು. ಈ ಸಂಗತಿ ನಿಶ್ಚಿತವಾದೊಡನೆ ಅವರಿಗೆ ಸ್ವಲ್ಪ ಸಮಾಧಾನವಾಯಿತು. ಹಾಸಿಗೆಗೆ ಒರಗಿಕೊಂಡು ಸಿಗರೇಟ ಸೇದುತ್ತಾ ಹೊರಳಾಡುತ್ತಿದ್ದರು.

ಸಿಗರೇಟ ಪೂರ್ತಿ ಮುಗಿದಿರಲಿಲ್ಲ. ಹೊರಗೆ ಯಾರೋ ಬಂದಿರುವರೆಂದು ಆಳು ಬಂದು ತಿಳಿಸಿದನು. ಭೇಟಿಯ ಚೀಟಿಯ ಮೇಲೆ "ಶ್ರೀನಿವಾಸರಾವ್" ಎಂದು ದೊಡ್ಡ ಅಕ್ಷರದಿಂದ ಬರೆದಿತ್ತು. ಒಂದು ಪಾರ್ಶ್ವದಲ್ಲಿ ಶ್ರೀನಿವಾಸ್ ಎಂಡ್ ಸನ್ಸ್, ಹೌರಾ ಕಲಕತ್ತಾ ಎಂದು ಬರೆದಿತ್ತು. ( ಈ ವಿಳಾಸದ ನೆನಪು ಅವರಿಗೆ ಬೇಗನೆ ಆಗಲಿಲ್ಲ. ವಿಚಾರಮಾಡಿ ನೋಡಲು ತಮ್ಮ ಯಂತ್ರದ ನಕಾಶೆಯನ್ನು ಇವರಿಗೆ ಕಳಿಸಿದ ನೆನಪು ಬಂತು. ) ಅವರು ಎಲ್ಲಿ ಕೂತಿರುವರು? ಎಂದು ಆಳಿಗೆ ಕೇಳಿದರು.

ಜವಾಬು— ಕೆಳಗಿನ ಕೋಣೆಯಲ್ಲಿ ಕೂತಿರುತ್ತಾರೆ.

ಬಾಯೊಳಗಿನ ಬೀಡಿಯನ್ನು ಹಾಗೇ ಬಿಸಾಡಿ, ಅವರ ಹತ್ತಿರಕ್ಕೆ ಹೊರಟು ಹೋದರು. ಒಬ್ಬ ದೃಢಕಾಯದ ಮನುಷ್ಯನು ಖುರ್ಚಿಯ ಮೇಲೆ

ಕೂತಿರುವುದನ್ನು ಕಂಡರು (ವೆಂಕಟರಾಯರು ಒಳಗೆ ಹೋದಕೂಡಲೆ ಅವರ ಕಡೆ ತಿರುಗಿ,) ಅವನು ನೀವೇ-ವೆಂಕಟರಾಯರೋ? ಎಂದು ಕೇಳಿದನು.

**ವೆಂಕಟರಾವ್** — ಹೌದು. ಏಕೆ ಬಂದಿರುವಿರಿ? ಎಂದು ಕೇಳುತ್ತ ಜೇರಿ ಬೀರಿಯ ಮೇಲೆ ಕೂತು ಘಡಿಯಾರವನ್ನು ನೋಡುತ್ತ ಹನ್ನೆರಡು ಆಗಿರುವುದಲ್ಲವೆ? ನಾನು ಒಂದು ಘಂಟೆಗೆ ಬೇರೆ ಕಡೆ ಹೋಗಬೇಕಾಗಿದೆ.

**ಶ್ರೀನಿವಾಸರಾವ್**:— ಒಂದು ತಾಸು ಅವಕಾಶವಿದೆಯಲ್ಲ? ಅಷ್ಟೇ ಸಾಕು. ಮಾತುಗಳು ಬೇಕಾಗಿಲ್ಲವೆಂದು ಹೇಳಿ, ಗಟ್ಟಿಯಾಗಿ ಕೂಗಿದರು.

**ವೆಂಕಟರಾವ್**. ನಗುತ್ತ ನಗುತ್ತ ಯಾವ ವಿಷಯ ಮಾತಾಡುವುದು" ಇವರ ನೆನಪಾ .....

**ಶ್ರೀನಿವಾಸರಾವ್** ಜ್ಞಾಪಕವಿಲ್ಲವೇ? (ಎಂದು ಅವರ ಮಾತು ಮುಗಿಯುವುದರೊಳಗೆ ಹೇಳಿದರು) ನೀವು ಹೇಳುವದಾದರೂ ಏನು? ನಿಮ್ಮ ಕಡೆಯಿಂದ ಈ ದಿನ ಪತ್ರ ಬಂದೀತು, ನಾಳೆ ಬಂದೀತು ಎಂದು ಅನೇಕ ತಿಂಗಳು ದಾರಿ ನೋಡಿದೆವು. ಕೊನೆಗೆ ಬಹಳ ಪ್ರಯಾಸದಿಂದ ನಿಮ್ಮ ಶೋಧವನ್ನು ಹಚ್ಚಿದೆವು. ಇನ್ನ ಕಷ್ಟ ನಿಮಗೇನು ಗೊತ್ತು! ಬೇರೆಯವರಿಗೆ ಗೊತ್ತಾಗುವದಾಗಿಲ್ಲ.

ವೆಂಕಟರಾಯರು ಏನೂ ಮಾತಾಡಲಿಲ್ಲ. ಅವರ ಮಾತನ್ನು ಕೇಳುತ್ತಲಿದ್ದರು.

**ಶ್ರೀನಿವಾಸರಾವ್**.— ನಾನು ನಿಮ್ಮ ನೂಲು ತೆಗೆಯುವ ಯಂತ್ರದ ವಿಷಯವಾಗಿ ಮಾತಾಡಲು ಬಂದಿರುವೆನು. ಯಂತ್ರವು ಈಗಿನಕಾಲಕ್ಕೆ ಅನುಕೂಲವಾಗಿರುವದಾಗಿ ನಮ್ಮ ಅಭಿಪ್ರಾಯವಾಗಿದೆ.

**ವೆಂಕಟರಾವ್** —(ಈಗ ಸರಿಯಾಗಿ ಎಲ್ಲ ವಿಷಯವೂ ತಿಳಿಯಿತು) ಹೌದೋ; ನಾನು ನಿಮಗೆ ಯಂತ್ರದ ನಕಾಶೆಯನ್ನು ಬಹಳ ದಿವಸದ ಹಿಂದೆ ಕಳಿಸಿಕೊಟ್ಟಿದ್ದೆನಲ್ಲವೇ?

**ಶ್ರೀನಿವಾಸರಾವ್** — ನೀವು ಹೇಳುವುದು ನಿಜ. (ಮೇಜಿನಮೇಲಿಟ್ಟ ರುಮಾಲನ್ನು ನೋಡುತ್ತಾ) ಆ ಯಂತ್ರದಲ್ಲಿ ಎಷ್ಟೋ ಉಪಯುಕ್ತ

**ಶ್ರೀನಿವಾಸರಾವ್** — ಎಂಥ ವರ್ಷ! ಅದುವರೆಗೆ ಈ ಸಕ್ಕರೆಯು ಹಾಗೇ ಬಿದ್ದಿತ್ತೇ?

**ವೆಂಕಟರಾವ್.** — ಹೌದು. ಅದರ ಪುನರುಜ್ಜೀವನಕ್ಕೆ ದುಡ್ಡಿನ ಅನುಕೂಲತೆ ಇರಲಿಲ್ಲ.

**ಶ್ರೀನಿವಾಸರಾವ್:** — ನಿಮಗೂ ಹೊರಗೆ ಹೋಗುವ ಕೆಲಸವಿದೆ. ನನಗೂ ಬೇರೆ ಕೆಲಸವಿದೆ. ನಾನಂತೂ ಕೆಲಸದ ಮನುಷ್ಯನು.

**ವೆಂಕಟರಾವ್** ಹಾಗಾದರೆ ನಿಮ್ಮ ಅಭಿಪ್ರಾಯವಾದರೂ ಏನು?

**ಶ್ರೀನಿವಾಸರಾವ್** — ಯಂತ್ರದ ನಮೂನೆಯು ಮೇಲೆ ವಿಶ್ವಾಸ ವಿಟ್ಟು ಅಲ್ಪ ಪ್ರಮಾಣದಿಂದ ಪ್ರಯೋಗವನ್ನು ಮಾಡಿ ನೋಡುತ್ತಲಿದ್ದೇವೆ.

**ವೆಂಕಟರಾವ್** ಹಾಗೇನು?

**ಶ್ರೀನಿವಾಸರಾವ್:** ನಮೂನೆಗೋಸ್ಕರ ಒಂದು ಸಣ್ಣ ಯಂತ್ರವನ್ನು ತಯಾರಿಸಿರುತ್ತೇನೆ.

**ವೆಂಕಟರಾವ್** (ಗಂಭೀರ ಮುದ್ರೆಯಿಂದ) ಹೂಂ! ಎಂದು ತಲೆದೂಗಿದರು.

**ಶ್ರೀನಿವಾಸರಾವ್** — ಯಂತ್ರವನ್ನು ನಾವು ಉಪಯೋಗಿಸಿ ನೋಡಿದೆವು. ನೂರಿನ ವ್ಯಾಪಾರಿಗಳಿಗೆ ಅದನ್ನು ತೋರಿಸಿದೆವು. ಇವೆಲ್ಲವನ್ನು ನಮ್ಮ ಖಾಸಗಿ ರೀತಿಯಿಂದ ಮಾಡಿರುತ್ತೇವೆ. ಆದರೆ ಅದರ ವಾರ್ತೆಯು ಮಾತ್ರ ಗುಟ್ಟಿನಲ್ಲಿ ಉಳಿಯಲಿಲ್ಲ. ಅದರ ಸಂಬಂಧ ಚರ್ಚೆ ನಡೆದು ಯಂತ್ರಗಳಿಗೆ ಕೆಲವು ಗಿರಾಕಿಗಳಿಂದ ಆಹ್ವಾನವೂ ಬಂದಿದೆ. ನಿಮಗೆ ತಿಳಿಸದೆ ನಾವು ಯಂತ್ರ ತಯಾರಿಸಿ ಕಳಿಸಲು ಬರುವಂತಿಲ್ಲ. ಯಾವುದಾದರೂ ನೆವದಿಂದ ಯಂತ್ರ ಕಳಿಸುವುದನ್ನು ಮುಂದೆ ಸಾಗಿಸುತ್ತಲಿದ್ದೇನೆ.

**ವೆಂಕಟರಾವ್.**— ನನಗೆ ತಿಳಿಸದೆ ಪ್ರಯೋಗ ಸಹ ಮಾಡಿ ಬಿಟ್ಟಿರುತ್ತೀರಿ! ಇದು ಕಡಬುವಾದರ ನೀತಿ ಇರಬಹುದೆಂದು ತೋರುವದು.

**ಶ್ರೀನಿವಾಸರಾವ್** — ಹೀಗೇಕೆ ಹೇಳುವಿರಿ? ಯಂತ್ರವು ಯಶಸ್ವಿಯಾಗದಿದ್ದರೆ ನಮ್ಮ ಶ್ರಮವೂ ಹಣವೂ ವ್ಯರ್ಥವಾಗುತ್ತಿರಲಿಲ್ಲವೇ?

**ವೆಂಕಟರಾವ್**:— ನಾನು ಕೆಲಸಗಾರನಲ್ಲ, ಆದರೂ ನನಗೆ ಸ್ವಲ್ಪ ವ್ಯವಹಾರಜ್ಞಾನವಿದೆ

**ಶ್ರೀನಿವಾಸರಾವ್**:—ಹಾಗೆ ತಿಳಿದೇ ನಾನು ನಿಮ್ಮ ಕಡೆಗೆ ಬಂದೆನು. ಇಷ್ಟು ದಿವಸ ನಿಮಗೆ ಈ ವಿಚಾರ ತಿಳಿದಿರಲಿಲ್ಲ. ಇದು ನಮ್ಮ ತಪ್ಪಲ್ಲ. ಮದ್ರಾಸದ ನಿಮ್ಮ ಪತ್ತೆಗೆ (ವಿಳಾಸಕ್ಕೆ) ನಾವು ಒಂದು ಪತ್ರವನ್ನು ಬರೆದಿದ್ದೆವು, ಆದರೆ ವಿಳಾಸದಾರರು ಇಲ್ಲವೆಂದು ಆ ಪತ್ರವು ವಾಪಸು ಬಂತು. ಬಹಳ ದಿವಸ ನಿಮ್ಮ ಶೋಧ ಹಚ್ಚಿದೆವು. ಆದಾಗ್ಯೂ ನಮಗೆ ನಿಮ್ಮ ವಿಳಾಸವು ದೊರೆಯಲಿಲ್ಲ. ನೀವಾದರೂ ಪತ್ರಬರೆಯಲಿಲ್ಲ; ಆಗಲಿ. ಈ ಯಂತ್ರದಲ್ಲಿ ಏನೋ ಮಹತ್ವವಿದ್ದಂತೆ ನೀವು ಭಾವಿಸಿರಬೇಕು. ಎರಡನೆಯವರ ಜ್ಞಾನದ ಲಾಭವನ್ನು ಹೊಂದುವುದು ನಮಗೆ ಶ್ರೇಯಸ್ಕರವಲ್ಲ. ನಿಮ್ಮ ವಿಳಾಸ ಹೇಗೆ ದೊರೆತೀತೆಂಬ ಚಿಂತೆಯಲ್ಲಿದ್ದೆವು. ಅಷ್ಟರೊಳಗೆ ಸನಾತನ ಪತ್ರಿಕೆಯ ರವಿವಾರದ ಅಂಕವು ನಮ್ಮ ಕೈಗೆ ಸಿಕ್ಕಿತು. ಅದರಲ್ಲಿ ನಿಮ್ಮ ಲಗ್ನದ ಸುದ್ದಿಯೂ ಮತ್ತು ಯಂತ್ರದ ಸುದ್ದಿಯೂ ಬರೆದಿತ್ತು. ನೀವಿಬ್ಬರೂ ಹವಾಬದಲಾವಣೆಗೆ ಹಂಗಾಮಿಯಾಗಿ ನೀಲಗಿರಿಗೆ ಹೋಗಿರುವುದಾಗಿ ಆ ಪತ್ರಿಕೆಯಿಂದ ತಿಳಿಯಿತು. ಕೂಡಲೆ ನಿಮ್ಮ ಅಭಿಪ್ರಾಯ ತಿಳಿಯಲು ನಮ್ಮ ಕಂಪನಿಯವರು ನನ್ನನ್ನು ಕಳಿಸಿದರು.

**ವೆಂಕಟರಾವ್**— ನೀವು ಈ ರೀತಿ ಕಷ್ಟತೆಗೆದುಕೊಂಡದ್ದು ನನಗೆ ಬಹಳ ಉಪಕಾರವಾದಂತಾಗಿದೆ. ( ನಗನಗುತ್ತ ಕಂಪನಿಯವರು ಕಾಗದ ಬರೆದದ್ದು ತನಗೆ ತಲುಪಿದ್ದನ್ನು ನಿಜವೆಂದು ತಿಳಿದರು. )

**ಶ್ರೀನಿವಾಸರಾವ್**:— ಹಾಗಾದರೆ ಆ ಯಂತ್ರದ ಸಲುವಾಗಿ ನೀವು ಏನು ಹೇಳುತ್ತೀರಿ.

**ವೆಂಕಟರಾವ್**:— ನನಗೆ ಅವಸರದಿಂದ ಹೇಳಲು ಸಾಧ್ಯವಿಲ್ಲ.

**ಶ್ರೀನಿವಾಸರಾವ್**:— ಹ್ಯಾಗೆ ಹೇಳುತ್ತೀರಿ ?

**ವೆಂಕಟರಾವ್**:— ನಿಮ್ಮ ಸಂಗತಿಗಳನ್ನೆಲ್ಲ ಕೇಳಿರುತ್ತೇನೆ. ಒಂದೆರಡು ವಾರ ಆಲೋಚನೆ ಮಾಡಲು [illegible] ?

**ಶ್ರೀನಿವಾಸರಾವ್**:— ಎರಡುವಾರ! ಕೆಲಸಗಾರರಿಗೆ ಹೀಗೆ ದಿನ ಕಳೆದರೆ ಹ್ಯಾಗಾದೀತು?

**ವೆಂಕಟರಾವ್**— ನಿಮಗೆ ಇಷ್ಟು ಅವಸರವೇಕೆ. (ಬೇಕಾಗಿ ಈ ಮಾತನ್ನು ಕೇಳಿದರು.)

**ಶ್ರೀನಿವಾಸರಾವ್**:— ಓಹೋ, ಈಗ ಹೇಳಲಿಲ್ಲವೇ? ಯಂತ್ರದ ಮಾಹಿತಿಯು ಎಲ್ಲರಿಗೂ ಗೊತ್ತಾಗಿದೆಯೆಂದು; ವ್ಯಾಪಾರಿಗಳ ಅಭಿಪ್ರಾಯ ತೆಗೆದುಕೊಳ್ಳಲು ನಾವು ಅದನ್ನು ತೋರಿಸಿದೆವು. ಎಲ್ಲ ವ್ಯಾಪಾರಿಗಳೂ ನಮ್ಮಂತೆ ಎಲ್ಲಿ ಇರುತ್ತಾರೆ.

**ವೆಂಕಟರಾವ್**:— ಇರಬಹುದು. ಅದರಿಂದ ನಮಗೇನು ನಷ್ಟ ವಾಗಬೇಕಾಗಿದೆ.

**ಶ್ರೀನಿವಾಸರಾವ್**:—ಏನು ಲುಕ್ಸಾನು ಆಗಬೇಕು? ನಿಮಗೆ ಲೋಕ ವ್ಯವಹಾರ ಕಡಿಮೆ. ಯಂತ್ರದ ನಮೂನೆಯು ಈಗ ಹೊರಬಿದ್ದಿರುತ್ತದೆ. ಅದರಂತೆ ಯಾರಾದರೂ ಯಂತ್ರ ಮಾಡಿಬಿಡಬಹುದು. ನೀತಿ ದೃಷ್ಟಿಯಿಂದ ಅದರ ಮೇಲೆ ನಿಮಗೆ ಮಾಲಕೀ ಉಳಿಯಿತು. ಆದರೆ ವ್ಯವಹಾರದಲ್ಲಿ ನೀತಿ ಯಲ್ಲಿರುವದು! ಅದಕ್ಕೋಸ್ಕರವೇ ಅವಸರ ಮಾಡುತ್ತೇನೆ. ಅದರೊಳ ಗಿನ ಗುಟ್ಟು ಹೊರಬಿದ್ದಿರುವುದು. ಮತ್ತು ಸರಕಾರದಿಂದ ಸನದನ್ನು ಕೂಡ ತೆಗೆದುಕೊಂಡಿರುವುದಿಲ್ಲ. ಅದರಿಂದ ಈಗಲೇ ಆದರ ವಿಥ್ಯರ್ಥವಾಗಬೇಕು.

ವೆಂಕಟರಾಯರಿಗೆ ತಮ್ಮ ತಂದೆಯು ಯಂತ್ರದಲ್ಲಿ ಬಹಳ ಬುದ್ಧಿಯನ್ನು ಖರ್ಚುಮಾಡಿರಬಹುದೆಂದು ತೋರಲಾರಂಭಿಸಿತು.

**ವೆಂಕಟರಾವ್**:— ಈಗ ಏನು ಹೇಳುತ್ತೀರಿ? ಯಂತ್ರದ ಮಾಲಕಿ ಹಕ್ಕನ್ನು ಕ್ರಯಕ್ಕೆ ಕೇಳುವಿರೇನು? ಆದರೆ ಅದನ್ನು ಮಾರುವ ಇಷ್ಟವು ನನಗಿರಲಿಲ್ಲ.

**ಶ್ರೀನಿವಾಸರಾವ್**:— ಅದಕ್ಕೆ ತಕ್ಕಂತೆ ಹಣ ದೊರೆತರೆ ಏಕೆ ಕೊಡಬಾರದು?

ವೆಂಕಟರಾಯರು ಬೆಂಕಿಯಕಡ್ಡಿಯನ್ನು ಹಚ್ಚಿ ಸಿಗರೇಟನ್ನು ಸೇದು ವುದಕ್ಕೆ ಪ್ರಾರಂಭಿಸಿ ಸಿಗರೇಟ ಡಬ್ಬಿಯನ್ನು ಅವರ ಎದುರಿಗೆ ಇಟ್ಟರು.

**ಶ್ರೀನಿವಾಸರಾವ್**:— ಈಗ ಏನು ವಿಚಾರ ಮಾಡುತ್ತೀರಿ?
(ಅದನ್ನು ತಿರಿಸಿಯೇ ಬಿಡಬೇಕೆಂದು ಅವರ ಇಷ್ಟ)

ಯಂತ್ರಕ್ಕೆ ಈ ರೀತಿ ಗಿರಾಕಿ ಬಂದದ್ದನ್ನು ನೋಡಿ ವೆಂಕಟರಾಯರಿಗೆ ಆಶ್ಚರ್ಯವಾಯಿತು. ಜೋಯಿಸರ ಮಾತಿನ ಪ್ರಕಾರ ಅಕಸ್ಮಾತ್ತಾಗಿ ಈ ಪ್ರಸಂಗ ಬಂದದ್ದನ್ನು ನೋಡಿ ಜೋಯಿಸರನ್ನು ಮನಸ್ಸಿನಲ್ಲಿಯೇ ಸ್ತುತಿಸಿದರು. ಬೇಕಾದಷ್ಟು ಹಣ ದೊರೆಯುವುದರಿಂದ ಸಮಾಜದಲ್ಲಿ ನಾನು ಗೌರವ ಹೊಂದಬಹುದು. ಮತ್ತು ನಿರ್ಮಲೆಯ ಸಂಸರ್ಗವಾಗುವ ಪ್ರಸಂಗವು ಬಂದುದನ್ನು ಮನಸ್ಸಿನಲ್ಲಿ ಆಲೋಚಿಸಿ ಸಂತೋಷಪಟ್ಟರು. ಆದರೆ ಈ ಆನಂದವನ್ನು ಅವರು ಹೊರಗೆ ತೋರಿಸಲಿಲ್ಲ.

**ವೆಂಕಟರಾವ್**:— (ಗಂಭೀರಮುದ್ರೆಯಿಂದ) ನೀವು ಹೇಳುವಂತೆ ಜಾಸ್ತಿಯಾಗಿಯೇ ಹಣದೊರೆಯಬಹುದು. ನೀವು ನಿಮ್ಮ ಕಾರ್ಯಕ್ಕೋಸ್ಕರ ನಿಮ್ಮ ಮಹತ್ವದ ಕಾಲವನ್ನು ಕಳೆದು ಈ ಉಷ್ಣಕಾಲದಲ್ಲಿ ಇಷ್ಟು ತೊಂದರೆ ತೆಗೆದುಕೊಂಡು ನನ್ನನ್ನು ಹುಡುಕಲು ಸುಮ್ಮನೆ ಬಂದಿರುವುದಿಲ್ಲ. ಅದರ ವಿಚಾರ ಮೇಲೆಯೇ ಕಾಣುತ್ತದೆ. ಆ ಯಂತ್ರದಲ್ಲಿ ಹಾಗೆ ವಿಲಕ್ಷಣ ಸ್ವರೂಪವೂ ಇರಬಹುದು. ಆದರೆ ಬಾಕಿ ಯಂತ್ರಗಳ ಲಕ್ಷಣವು ನನಗೆ ಗೊತ್ತಿರುವುದಿಲ್ಲ. ಯಂತ್ರಶಾಸ್ತ್ರದಲ್ಲಿ ಪ್ರವೀಣನಾದ ಒಬ್ಬ ಮನುಷ್ಯನು ನನಗೆ ಸ್ನೇಹಿತನಾಗಿರುತ್ತಾನೆ. ಅವನು ಮದರಾಸಿನಲ್ಲಿರುವನು. ಅವನ ಅಭಿಪ್ರಾಯ ಕೇಳಿದ ವಿನಹ ನಿಮಗೆ ನಾನು ಯಾವ ಉತ್ತರವನ್ನೂ ಹೇಳಲಾರೆ. ನಾನು ಈಗ ಮದರಾಸಿಗೆ ಹೋಗತಕ್ಕವನಿರುವೆನು. ನೀವು ಬಂದರೆ ಅನೂಕೂಲವೆಂದು ತೋರುವುದು.

**ಶ್ರೀನಿವಾಸರಾವ್**:— ಯಂತ್ರದ ಪರಿಚಯವಿಲ್ಲದಿದ್ದರೇನಾಯಿತು? ವ್ಯವಹಾರಜ್ಞಾನವೆಲ್ಲಿ ಹೋಗಿರುವುದು.

**ವೆಂಕಟರಾವ್**:—ನನ್ನ ಮಿತ್ರನಿಗೆ ತಿಳಿಸಿದ ವಿನಹ ನಾನು ಖಂಡಿತ ಏನೂ ಹೇಳಲಾರೆ. ಈ ದಿನ ನಿಮಗೆ ಅನುಕೂಲವಿಲ್ಲದಿದ್ದರೆ ಎರಡು ದಿವಸದ ನಂತರ ಬನ್ನಿರಿ. ನಾನು ಮದರಾಸಿನಲ್ಲಿಯೇ ಇರುವೆನು.

**ಶ್ರೀನಿವಾಸರಾವ್**:— ಇದರಿಂದ ಸುಮ್ಮನೆ ಕಾಲಹರಣವಾಗುವುದಲ್ಲದೆ ಮನಸ್ಸಿನಲ್ಲಿ ಬೇರೆ ಬದಲಾವಣೆ ತೋರಬಹುದು. ಕಾರಣ ನೀವೇ

ನಿಮ್ಮ ಮನಸ್ಸಿನ ಅಭಿಪ್ರಾಯವನ್ನು ಹೇಳಿ, ಈ ಕೆಲಸವನ್ನು ಇಲ್ಲಿಯೇ ಮುಗಿಸಿ ಬಿಡಬೇಕೆಂದು ನನ್ನ ಅಭಿಪ್ರಾಯ

**ವೆಂಕಟರಾವ್**:— ನೀವು ಮದರಾಸಿಗೆ ಬರಲು ಅಡ್ಡಿ ಏನಿರುವುದು? ಅದರಿಂದ ನಿಮ್ಮ ಮುಂದಿನ ಪ್ರಯಾಣಕ್ಕೂ ಸುಲಭವಾಗಬಹುದಲ್ಲವೆ ?

**ಶ್ರೀನಿವಾಸರಾವ್**:— ನೀವು ಹೇಳುವುದು ನಿಜ. ನಿಮ್ಮ ಮಾತು ನಿಶ್ಚಯವಾದರೆ ನನಗೂ ಮದ್ರಾಸಿಗೆ ಹೋಗಬೇಕಾಗಿದೆ.

**ವೆಂಕಟರಾವ್**:—ಹೀಗೇನು, ನಿಮಗೂ ಹೋಗುವ ಕೆಲಸವಿದೆಯೇ ?

**ಶ್ರೀನಿವಾಸರಾವ್**:— ಹೌದು. ಈ ಯಂತ್ರದ ಸಂಬಂಧವಾಗಿಯೇ ಸ್ವಲ್ಪ ಕೆಲಸವಿದೆ. ಕಾರಣ ಈಗಿಂದೀಗಲೆ ಇವರ ವಿಚಾರ ತೀರಬೇಕಾಗಿದೆ. ನಮ್ಮ ವ್ಯವಹಾರವೆಲ್ಲ ಸರಳರೀತಿಯಾಗಿ ನಡೆಯುತ್ತಾವೆ. ನಿಜವಾಗಿಯೂ ಈ ಯಂತ್ರವೂ ವಿಲಕ್ಷಣವಾಗಿದೆ. ಯಂತ್ರದಿಂದ ನೂಲುತೆಗೆಯುವ ಕ್ರಾಂತಿಯು ಬಹಳ ಹೆಚ್ಚಾಗಿ ನಡೆದೀತು.

ಶ್ರೀನಿವಾಸರಾಯರ ಗಾಡಿಯು ಹಾಗೇ ನಿಂತಿತ್ತು. ಇಬ್ಬರೂ ಹೊರಗಡೆ ಬಂದರು.

ಯಂತ್ರವು ನಿಜವಾಗಿಯೂ ಹೊಸಪ್ರಕಾರದ್ದಿತ್ತು. ಮಾಲಕಿಯ ಹಕ್ಕಿಗೋಸ್ಕರ ಕೊಡುವ ಹಣವೂ ಅದಕ್ಕೆ ಸರಿಯಾಗಿತ್ತು. ಡಾಕ್ಟರ ಕಾಮತರ ಕಡೆಗೆ ಹೊರಡುವ ಮೊದಲು ಶ್ರೀನಿವಾಸರಾಯರು ಇಪ್ಪತ್ತೈದು ಸಾವಿರ ರೂಪಾಯಿಯ ಒಂದು ಚೆಕ್ಕನ್ನು ಜನರಲ್ ಬ್ಯಾಂಕಿನ ಹೆಸರಿಗೆ ಕೊಟ್ಟರು. ಅದನ್ನು ಅವರು ಜೇಬಿನಲ್ಲಿಟ್ಟಿದ್ದರು. ಮತ್ತು ಆಗಾಗ್ಗೆ ಜೇಬಿಗೆ ಕೈಹಾಕಿ ಅದನ್ನು ನೋಡಿಕೊಳ್ಳುತ್ತಿದ್ದರು. ಅವರ ತಂದೆಯ ಮನಸ್ಸಿನಂತೆ ಈದಿನ ಆ ಕಾಗದವನ್ನು ಕೊಳ್ಳುವ ಲಕ್ಷ್ಮೀಪುತ್ರನು ದೊರೆತಂತೆಯಾಯಿತು. ಈ ಹಿಂದೆ ಆ ಕಾಗದವನ್ನು ದೇವರ ಮನಸ್ಸಿನಲ್ಲಿ ಏನಿರುವುದೋ ಎಂದು ಹೇಳಿದ ಸಂಗತಿ ವಾಚಕರ ಮನಸ್ಸಿನಲ್ಲಿರಬಹುದು. ದೇವರ ಮನಸ್ಸಿನಲ್ಲಿ ಇದೇ ವಿಚಾರವಿತ್ತು. ಆದರೆ ಅವರಿಗೆ ಅದು ಕಾಣುವಂತಿರಲಿಲ್ಲ. ಇದಕ್ಕೆ ಅದೃಷ್ಟವೆನ್ನುತ್ತಾರೆ.

---

# ೧೮ನೆಯ ಪರಿಚ್ಛೇದ.

## ಕರಾರನ್ನು ನೀನೂ ಉಲ್ಲಂಘಿಸು.

ಔಷಧಾಲಯದಿಂದ ಸಾವಕಾಶವಾಗಿ ಕಾಲಿಡುತ್ತ ವೆಂಕಟರಾಯರು ಹೊರಬಿದ್ದರು. ಅವರಲ್ಲಿ ಹೊಸಚೈತನ್ಯವು ಉಂಟಾದಂತೆ ತೋರುತ್ತಿತ್ತು. ಸುಮಾರು ಒಂದು ವರ್ಷ ಕಳೆಯುವುದು ಕಷ್ಟವೆಂದು ಹೇಳಿದ ಕಾಮತ ಡಾಕ್ಟರರ ಅಭಿಪ್ರಾಯವು ಇಂದು ಸುಳ್ಳಾಯಿತು. ಈ ಸ್ಥಿತಿಯು ಹೇಗೆ ಉಂಟಾಯಿತೆಂದು ಡಾಕ್ಟರ ಸಾಹೇಬರು ವೆಂಕಟರಾಯರಿಗೆ ಸರಿಯಾಗಿ ತಿಳಿಸಿ ಹೇಳಿದರು. ಆ ವಿಷಯವು ವೈದ್ಯಕೀ ಭಾಷೆಯಲ್ಲಿರುವುದರಿಂದ ಅದನ್ನು ಇಲ್ಲಿ ಹೇಳುವುದನ್ನು ಬಿಟ್ಟಿರುತ್ತೇವೆ. ನಮ್ಮ ಅಭಿಪ್ರಾಯವು ಹೀಗಿದೆ ಕರಾರು ಆದ ಮೇಲೆ ನೌಕರಿಯ ತೊಂದರೆಯು ತಪ್ಪಿತು. ಸಾಹುಕಾರರ ತಗಾದೆಯು ದೂರಾಯಿತು. ಉದಕಮಂಡಲದಂತಹ ಉತ್ತಮ ಹವೆಯ ಸ್ಥಳದವಾಸವು ದೊರೆಯಿತು. ಊಟದ ವ್ಯವಸ್ಥೆಯಲ್ಲಿ ಕುಂದಿರುವಹಾಗಿರಲಿಲ್ಲ. ಯಾವ ಚಿಂತೆಯೂ ಇಲ್ಲದಂತಾಯಿತು. ಕಾರಣವೇ ಪ್ರಕೃತಿಯಲ್ಲಿ ನಂಬಲಾಗದ ಬದಲಾವಣೆಯುಂಟಾಯಿತು." ಬಾಕಿ ಯಾವಕಾರಣವನ್ನೂ ಹೇಳಿದರೆ ಅದು "ಒನಕೆ ಚಿಗುರಿತು" ಎಂಬ ಗಾದೆಯಂತೆಯೇ ಸರಿ?

ಇಂಥ ಸಮಯದಲ್ಲಿಯೇ ಇಪ್ಪತ್ತೈದುಸಾವಿರ ರೂಪಾಯಿಯು ಚೆಕ್ಕು ಸಿಕ್ಕಿತು ಭಗವಂತನು ಕೊಡುವ ಕಾಲಕ್ಕೆ ಎರಡು ಕೈಯಿಂದ ಎತ್ತು ತೆಗೆದುಕೊಳ್ಳುವದು! ಅವರ ಸ್ಥಿತಿಯೂ ಹೀಗಾಗಿತ್ತು. ದೇವರು ಅವರಿಗೆ ಆಯುಷ್ಯ ಪ್ರಮಾಣವೆಂಬ ಒಂದು ದೊಡ್ಡ ದೇವಣಿ ಗಂಟನ್ನು ಕಳಿಸಿದ್ದನು. ಇದಕ್ಕಿಂತಲೂ ಮನುಷ್ಯನಿಗೆ ಹೆಚ್ಚಿನ ಬೆಲೆಯವಸ್ತು ಯಾವದಿರುವದು? ಕಾಮತ ಡಾಕ್ಟರರ ಮೊದಲನೇ ಅಭಿಪ್ರಾಯ ಕೇಳಿದಾಗಿನಿಂದ ಅವರು ಜೀವವುಳ್ಳ ಹೆಣವೆಂದು ಭಾವಿಸಿಕೊಂಡಿದ್ದರು. ಆದರೆ ಆ ಸ್ಥಿತಿಯು ಈ ದಿನ ಬದಲಿಸಿತು. ಸುಮಾರು ಒಂದು ವರ್ಷ ಕಳೆದೀತು. ಎಂಬ ಭೀತಿಯು ಹೋಗಿ ಸುಖದ ತಿಂಗಳುಗಳು, ವರ್ಷಗಳು ಕಾಣಲಾರಂಭಿಸಿದವು. ಫಾಶಿಕೊಡಲು ಶೂಲಕ್ಕೇರಿಸಿದ ಮನುಷ್ಯನಿಗೆ ದೈವೀಚಮತ್ಕಾರದಿಂದ ಕೆಳಗಿಳಿಸಿದಂತೆ ಈ ಸ್ಥಿತಿಯಾಗಿದೆ.

ಡಾಕ್ಟರರ ಮನೆಯಿಂದ ಅವರು ನೆಟ್ಟಗೆ ರೇಲ್ವೇ ಸ್ಟೇಶನಕ್ಕೆ ಬಂದರು. ಟ್ರಂಕಿನಲ್ಲಿರುವ ಹಣ ಮತ್ತು ನಿರ್ಮಲೆಯ ಸುಖಕರವಿಚಾರ ಈ ಸಂಗತಿಗಳು ಅವರ ಮನಸ್ಸಿನಲ್ಲಿ ಶಾಂತಿಯನ್ನುಂಟುಮಾಡಿದವು. ನಿನ್ನೆಯಿಂದ ನಿರ್ಮಲೆಯ ವಿಷಯದಲ್ಲಿ ಪ್ರೀತಿಯು ಹೆಚ್ಚುತ್ತ ನಡೆಯುವದೆಂದು ನಂಬಿಕೆಯುಂಟಾಯಿತು. ಯಾಕಂದರೆ ಅವಳಂತೆ ಇವರೂ ಲಕ್ಷ್ಮೀಪುತ್ರರಾಗಿದ್ದರು.

ತಮ್ಮ ಬಿಡಾರಕ್ಕೆ ಹೋದೊಡನೆ ಮೊದಲು ನಿರ್ಮಲೆಯ ಕೋಣೆಗೆ ಹೋದರು. ಆಗ ಬೆಳಗಿನ ಏಳು ಘಂಟೆಯಾದ್ದರಿಂದ ನಿರ್ಮಲೆಯು ಚಹಾ ಕುಡಿಯುತ್ತಿದ್ದಳು. ಅವಳ ಕಣ್ಣುಗಳನ್ನು ನೋಡಿದರೆ ರಾತ್ರಿ ಜಾಗರಣೆಯಾದಂತೆ ತೋರುತ್ತಿತ್ತು. ವೆಂಕಟರಾಯರು ಒಳಗೆ ಬಂದ ಕೂಡಲೆ ಅವಳು ಮೇಲೆ ನೋಡಿದಳು. ಅವರನ್ನು ನೋಡಿದ ಕೂಡಲೆ ಅವಳಿಗೆ ಆಶ್ಚರ್ಯವಾಯಿತು.

**ನಿರ್ಮಲೆ:**—ಎರಡು ದಿವಸದಲ್ಲಿ ಇವರ ಪ್ರಕೃತಿಯು ಇಷ್ಟು ಬದಲಾಯಿತೇ? (ಎಷ್ಟು ಹೆಚ್ಚುಕಡಿಮೆ! ನಮೂನೆಯೇ ಬೇರೆಯಾಗಿದೆ!! ಎಂದು ಮನಸ್ಸಿನಲ್ಲಿಯೇ ಅಂದು ಕೊಂಡಳು.)

**ವೆಂಕಟರಾವ್:**—(ಸಮೀಪದ ಖುರ್ಚಿಯಮೇಲೆ) ಕುಳಿತು. ಬಹಳ ಬದಲಾವಣೆಯಾಗಿರುವುದಲ್ಲವೇ? ಎಂದು ಕೇಳಿದರು.

**ನಿರ್ಮಲೆ:**— ನೀವು ಹೋಗುವಾಗ್ಯೆ ಒಂದು ಶಬ್ದವನ್ನಾದರೂ ತಿಳಿಸಿದ್ದರಾಗುತ್ತಿರಲಿಲ್ಲವೆ? ಆಗಲಿ, ಚಹವನ್ನು ತೆಗೆದುಕೊಳ್ಳಿರಿ. (ಅವಳು ಆಳಿಗೆ ಚಹಾ ತರಲು ಹೇಳಿದಳು.)

**ವೆಂಕಟರಾವ್** :— ಚಹವನ್ನು ಕುಡಿದು, ನಾನು ಡಾಕ್ಟರರಲ್ಲಿ ಹೋಗಿದ್ದೆನು.

**ನಿರ್ಮಲೆ:**— ಪ್ರಕೃತಿಯು ಈಗ ಸುಧಾರಿಸಿದಂತೆ ತೋರುತ್ತದೆ. ಡಾಕ್ಟರರ ಕಡೆಗೆ ಹೋಗುವಾಗ ನನಗೇಕೆ ತಿಳಿಸಲಿಲ್ಲ?

**ವೆಂಕಟರಾವ್:**— ತಿಳಿಸಲಿಲ್ಲ. ಅದರಿಂದ ಆದ ತಪ್ಪೇನು? ಎಂದು ಚೇಷ್ಟೆ ಮಾಡಿದರು.

**ನಿರ್ಮಲೆ:**— ನಾನೂ ನಿಮ್ಮ ಸಂಗಡ ಬರುತ್ತಿದ್ದೆನು.

ವೆಂಕಟರಾಯರು ನಿರ್ಮಲೆಯರೂಪಕ್ಕೆ ಪೂರ್ಣಮರುಳಾಗಿದ್ದರು. ಅವಳ ಈ ಮಾತನ್ನು ಕೇಳಿ ಇವು ಕೇವಲ ಪ್ರೇಮದಿಂದ ಮಾತಾಡುವ ಮಾತು ಗಳೆಂದುಭಾವಿಸಿದರು. ಆದರೆ ಅವು ನಿಜವಾಗಿಯೂ ಪ್ರೀತಿಯ ಮಾತುಗಳಾ ಗಿರಲಿಲ್ಲ ಮನುಷ್ಯನಿಗೆ ಪ್ರೇಮದ ಹುಚ್ಚು ಬಹಳ ದುಸ್ತರವಿರುವುದು. ಅವಳ ಈ ವಿಚಾರದಿಂದ ಅವರಿಗೆ ಪ್ರೇಮವು ಉತ್ಪನ್ನವಾಯಿತು. ಅಷ್ಟರಲ್ಲಿ ಅವರಿಗೆ ಚಕ್ಕಿನ ನೆನಪಾಯಿತು. ಆದ್ದರಿಂದ ಅವರ ಮನಸ್ಸಿನಲ್ಲಿ ನಿರ್ಮಲೆಯ ವಿಚಾರ ಆಶೆಯು ಹೆಚ್ಚಿತು. ಈ ಆನಂದದ ಭರದಲ್ಲಿ ಕೈ ಮುಂದೆ ಮಾಡಿ ನಿರ್ಮಲೆಯ ಕೈಯನ್ನು ಗಟ್ಟಿಯಾಗಿ ಹಿಡಿದರು.

ನಿರ್ಮಲೆಯು ಕೆಳಗೆ ನೋಡಲಾರಂಭಿಸಿಳು. ಮತ್ತು ಮನಸ್ಸಿನಲ್ಲಿ ಗಾಬರಿಯಾದಳು.

**ವೆಂಕಟರಾವ್** — ನಿರ್ಮಲೆ, ಈಗ ನಿನಗೆ ಒಂದು ವಿಷಯ ಹೇಳ ತಕ್ಕದ್ದಿದೆ.

( ಡಾಕ್ಟರರ ಅಭಿಪ್ರಾಯವನ್ನೂ ಇಪ್ಪತ್ತೈದು ಸಾವಿರ ರೂಪಾಯಿಯ ವಿಚಾರವನ್ನೂ ಹೇಳತಕ್ಕವರಿದ್ದರು.)

**ನಿರ್ಮಲೆ:**— ( ಸಿಟ್ಟಿನಿಂದ ಹಲ್ಲುಕಚ್ಚಿ ) ಏನು ?

ಅವರ ಕೈಗಳಿಗೆ ಹೊಸಚೈತನ್ಯವು ಬಂದಿರುವುದನ್ನು ಅವಳು ಪ್ರತ್ಯಕ್ಷ ಮನಗಂಡಳು. ಮತ್ತು ಮುಖಚರ್ಯೆಯು ಬದಲಾದುದನ್ನು ಈ ಮೊದಲು ತಿಳಿದುಕೊಂಡಿದ್ದಳು. ಪುನಃ ಏನು, ಎಂದು ಪ್ರಶ್ನಿಸಿದಳು.

**ವೆಂಕಟರಾವ್.** — ನಡುಗುತ್ತಿದ್ದರು.

ನಿರ್ಮಲೆಗೆ ಮೊನ್ನೆದಿನ ಪ್ರಾಪ್ತವಾದ ಪ್ರಸಂಗವು ಈ ದಿನ ಪುನಃ ಬರುವುದೋ ಏನೋ ಎಂಬ ಭೀತಿಯುಂಟಾಯಿತು.

**ವೆಂಕಟರಾವ್** :— ನಿರ್ಮಲೆಯನ್ನು ನೋಡಿ ನನ್ನ ಮನಸ್ಸಿನಲ್ಲಿ ಹೀಗಿರಲಿಲ್ಲ. ನಾನು ಏನು ಮಾಡಲಿ? ನನ್ನ ಕಡೆಯಿಂದ ತರಾರು....( ಕಂಪನ ಸ್ವರದಿಂದ ) ಮುರಿಯಿತು; ನಿಜ. ಆದರೆ ನನ್ನಲ್ಲಿ ಸ್ವಲ್ಪವೂ ದೋಷವಿಲ್ಲ.

ನಿನ್ನ ಪರೋಪಕಾರದಿಂದಲೇ ಹಾಗೆ ಆಗಲು ಕಾರಣವಾಯಿತು. ನಿನ್ನ ಆಲೋಚನೆಯಿಂದ ನನ್ನ ಸಾಲವು ತೀರಿತು. ನೌಕರಿಯ ತೊಂದರೆ ತಪ್ಪಿತು. ನನ್ನ ಸಂಕಟಗಳೆಲ್ಲ ದೂರಾದವು. ಸುಗ್ರಾಸ ಭೋಜನವು ಸಿಗಲಾರಂಭಿಸಿತು. ಮತ್ತು ನೀಲಗಿರಿಯಂಥ ಉತ್ತಮ ಹವೆ ಸ್ಥಳವು ದೊರೆಯಿತು. ಎಲ್ಲ ಭಾಗ ದಿಂದಲೂ ಅನುಕೂಲತೆಯುಂಟಾಗಿ ನನ್ನ ಪ್ರಕೃತಿಯೂ ಸುಧಾರಿಸಿತು. ನೀನೇ ವಿಚಾರಮಾಡಿ ನೋಡು? ಇದರಲ್ಲಿ ನನ್ನ ತಪ್ಪೇನಿರುವುದು?

ಅವಳು ಏನೂ ಮಾತಾಡಲಿಲ್ಲ.

**ವೆಂಕಟರಾವ್**:— ನೀನು ಯಾಕೆ ಮಾತಾಡುವುದಿಲ್ಲ? ಮತ್ತ ಯಾಕೆ ಕಷ್ಟಪಡುವೆ? (ಎಂದು ಪ್ರೇಮದಿಂದ ಹೇಳಿದರು) ಕರಾರು ಮುರಿ ದಿದ್ದರಿಂದ ಏನಾಯಿತು? ವಿಚಾರ ಮಾಡಿದರೆ ಕರಾರು ಅಸಂಬದ್ಧವಾಗಿದೆ. ಆದರಲ್ಲೂ ಯಾರು ಕರಾರು ಮಾಡಿಕೊಂಡಿರುತ್ತಾರೋ ಅವರಿಗೆ ಅದನ್ನು ಉಲ್ಲಂಘಿಸಲು ಅಧಿಕಾರವಿರುತ್ತದೆ. ಅದ್ದರಿಂದ ಕರಾರಿನ ವಿಷಯವಾಗಿ ನೀನು ಏಕೆ ಬಲಾತ್ಕಾರ ಮಾಡುತ್ತೀ. ಅದನ್ನು ನೀನೂ ಉಲ್ಲಂಘಿಸು. ಈಗ ಎರಡು ತಿಂಗಳಿಂದ ನಿನ್ನ ಸ್ವಭಾವವು ನನಗೆ ತಿಳಿದಿರುತ್ತದೆ ನಿನ್ನಂಥ ಮಾನವಂತೆ ಮತ್ತು ಅಂತಃಕರುಣವುಳ್ಳ ಪ್ರೇಮದ ತರುಣಿಯನ್ನು ನಾನು ಇದೂವರೆಗೆ ನೋಡಿರುವುದಿಲ್ಲ. ನಿನ್ನ ಕಠೋರತನವು ಔಪಚಾರಿಕವಾಗಿ ದ್ದಿರುವುದು. ಅಂತರಂಗದಲ್ಲಿ ನೀನು ಪೂರ್ಣ ಸಮಾಧಾನಿಯಾಗಿರುವೆ.

ಯಾಕೆ! ಸುಮ್ಮನೆ ಕೂತಿರುವೆಯಲ್ಲ? ಮಾತಾಡು, ಎಂದು ವೆಂಕಟರಾಯರು ಸನ್ನೆಯಿಂದ ಸೂಚಿಸಿದರು.

**ನಿರ್ಮಲೆ**:— (ಸ್ವಲ್ಪ ಜೋರಿನಿಂದ) ನಡೆಯಿರಿ. ದೂರಸರಿಯಿರಿ. ವೆಂಕಟರಾಯರು ದೂರಸರಿದು ನಿಂತುಕೊಂಡರು

ಅವಳಮುಖವು ಕೆಂಪೇರಿತು. ಕಣ್ಣಿನಲ್ಲಿ ಬೆಂಕಿ ಉದುರುವಂತೆ ತೋರುತ್ತಲಿದ್ದವು.

ನಿರ್ಮಲೆಯು ಹಿಂದೆ ಅನೇಕವೇಳೆ ಸಿಟ್ಟಾಗಿದ್ದಳು. ಆದರೆ ಹಿಂದಿನ ಸಿಟ್ಟಿಗಿಂತಲೂ ಈಗಿನಸಿಟ್ಟು ಹೆಚ್ಚಾಗಿರುವಂತೆ ತೋರಿತು. ಮತ್ತು ಅವಳ ಎದುರಿಗೆ ನಿಲ್ಲಲು ಅವರಿಗೆ ಧೈರ್ಯವಾಗಲಿಲ್ಲ.

ಅವಳು ಸಿಟ್ಟಿನಿಂದ ಏನೋ ಹೇಳುತ್ತ ಕೋಣೆಯಲ್ಲಿ ತಿರುಗಾಡುತ್ತಿದ್ದಳು. ಇಂಥ ವಿಷಯಗಳು ನನಗೆ ಎಂದೂ ಮಾನ್ಯವಾಗಲಾರವು ಎಂದು ಹೇಳುತ್ತ ಸಿಟ್ಟಿನಿಂದ ಕೈಬೆರಳುಗಳನ್ನು ಮುರಿದಳು.

**ವೆಂಕಟರಾವ್**:— ಲಗ್ನದ ವಿಚಾರವಾಗಿ ನಡೆದ ಕರಾರನ್ನು ಅನುಸರಿಸುವ ವಿಚಾರದಲ್ಲಿ ಈ ರೀತಿ ಭಿನ್ನಾಭಿಪ್ರಾಯವೇ? ಲಗ್ನವಾಗದೇ ಇದ್ದರೆ....

**ನಿರ್ಮಲೆ**:— (ಸಿಟ್ಟಿನಿಂದ ಕಾಲನ್ನು ನೆಲಕ್ಕೆ ಅಪ್ಪಳಿಸಿ) ಚೆನ್ನಾಗಿದೆ! ಇಂಥ ವಿಚಾರಗಳು ನಿಮ್ಮ ಮಿದುಳಿನಲ್ಲಿ ಹೇಗೆ ಸುಳಿದುವು. ಇದು ಸುಶಿಕ್ಷಿತರ ಲಕ್ಷಣವೆಂದು ತೋರುತ್ತದೆ!

ವೆಂಕಟರಾಯರಿಗೆ ಸ್ವಾಭಿಮಾನವಿರಲಿಲ್ಲವೆಂದಲ್ಲ, ಇವಳ ಒಂದೊಂದು ಶಬ್ದಗಳು ಬಾಣದಂತೆ ನಡುತ್ತಿದ್ದವು. ಅಪಮಾನವನ್ನು ಸಹಿಸಲಾಗಲಿಲ್ಲ. ಅವರು ಮಾತಾಡಲು ಪ್ರಯತ್ನಿಸುವರು. ಬಾಯಿಂದ ಶಬ್ದಗಳೇ ಬರುತ್ತಿರಲಿಲ್ಲ. ಕಾರಣ ಅವಳ ಕಡೆ ನಟ್ಟದೃಷ್ಟಿಯಿಂದ ನೋಡಲಾರಂಭಿಸಿದರು.

ಅವಳು ಕೋಣೆಯಲ್ಲಿ ತಿರುಗಾಡುತ್ತಲೇ ಇದ್ದಳು. ಒಮ್ಮಿಂದೊಮ್ಮೆ ಗಪ್ಪನೆ ನಿಂತುಕೊಂಡು "ಹಣದಾಶೆಗೋಸ್ಕರವಾಗಿ ನೀವು ಕರಾರಿಗೆ ಒಪ್ಪಿಕೊಂಡಿರುವಂತೆ ತೋರುವುದು. ಈಗಲೂ ಅದೇ ಮಾತು ಸಂಬಂಧಿಸಬಹುದು. ಈಗ ಹಣವೆಷ್ಟು ಬೇಕು?" ಹೇಳಿ.

ನಿರ್ಮಲೆಯ ಸೌಂದರ್ಯವು ವೆಂಕಟರಾಯರನ್ನು ಮರುಳುಮಾಡಿತ್ತು. ಅವರು ಯಾವುದಾದರೂ ಕಾರಣವನ್ನು ಮುಂದುಮಾಡಿ ಹಣವನ್ನೆತ್ತುವ ಆಲೋಚನೆಯನ್ನು ಸ್ವಪ್ನದಲ್ಲಿಯೂ ಮಾಡಿರಲಿಲ್ಲ. ಅದಕಾರಣ ಅವಳ ಈ ಕಠೋರವಾಕ್ಯಗಳು ಮನಸ್ಸೈಕ್ಯಕ್ಕೆ ಭಂಗವನ್ನುಂಟುಮಾಡಲು ಕಾರಣವಾದವು.

**ವೆಂಕಟರಾವ್**:— ಏನು? ಹಣವೇ!

**ನಿರ್ಮಲೆ**:— ಹೌದು ಪುನಃ ಕೇಳುತ್ತೇನೆ. ಬೆಲೆಯನ್ನು ಹೇಳಿರಿ.

**ವೆಂಕಟರಾವ್**:— ಇನ್ನೊಂದಾವೃತ್ತಿ ಈ ಮಾತನ್ನು ಹೇಳಬೇಡ.

**ನಿರ್ಮಲೆ** – ಲಗ್ನದ ಕಾಲವಲ್ಲದೇ ಕರಾರಿನ ವಿಚಾರದಲ್ಲಿ ತುಂಬಾ ಗಟ್ಟಿ ಯಾಗಿರುತ್ತದೆ. ಈಗ ಅದೇ ವಿಷಯವನ್ನು ಪುನರಾಲೋಚಿಸಬೇಕೆಂಬುದೇ? ನನಗೆ ಇಷ್ಟವಿರುವವರೆಗಾದರೂ ನಡೆಯಲಿಲ್ಲವೆಂಬುದು ಮುಖ್ಯವ ಸಂಗತಿಯಾಗಿದೆ. ಈ ದಿನ ನಡೆದ ಸಂಗತಿಯಲ್ಲಿ ನಿಮ್ಮದೇ ತಪ್ಪು ಇರುವುದು. ನಾನು ಇನ್ನು ವರೆಗೆ ಈ ರೀತಿ ಯಾರಿಗೂ ಸ್ವಾತಂತ್ರ್ಯವನ್ನು ಕೊಟ್ಟಿರಲಿಲ್ಲ. ನೀವು ಮಾತ್ರ ನನ್ನನ್ನು ಮೋಸಮಾಡಿದಿರಿ. ನಾನು ಏನು ಮಾಡಲಿ! ನಾನು ನಿಜವಾಗಿಯೂ ಮೂರ್ಖಳು. ಹತಭಾಗಿಯು. ಯಾಕೆಂದರೆ ಸರಿಯಾದ ವಿಚಾರ ವಿನಿಮಯವಿಲ್ಲದೆ, ನಿಮ್ಮೊಡನೆ ಲಗ್ನವಾದೆನು. ಇದು ಯೋಚಿಸಿದಲ್ಲಿ ಮೂರ್ಖತನದ ಪರಿಣಾಮವಲ್ಲವೇ?

ವೆಂಕಟರಾಯರು ಮೊದಲೇ ಸಂತಾಪಗೊಂಡಿದ್ದರು. ನಿರ್ಮಲೆಯು ಕಠೋರಶಬ್ದವನ್ನು ಕೇಳಿದ ಮೇಲೆ ತುಂಬಾ ವ್ಯಥೆಯುಂಟಾಯಿತು

**ವೆಂಕಟರಾವ್** ನಿರ್ಮಲೆ, ನಿನಗೆ ಏನೆಂದು ಹೇಳಬೇಕು? ನಿನ್ನಂಥ ನಿಷ್ಠುರ (ಕಠೋರ) ಹೆಂಗಸು ಯಾರೂ ಇಲ್ಲ. ಈ ಲಗ್ನಕ್ಕೆ ನೀನೇ ಕಾರಣಳಲ್ಲವೇ"

**ನಿರ್ಮಲೆ** - ನಾನೇ ಹೌದು; ಇನ್ನೊಂದಾವರ್ತಿ ಹೇಳಿರಿ.

ವೆಂಕಟರಾಯರಿಗೆ ಈ ಶಬ್ದಗಳನ್ನು ಕೇಳಲಾಗದೆ ಕಿವಿಗೆ ಅಡ್ಡಲಾಗಿ ಕೈಯನ್ನು ಹಚ್ಚಿದರು.

**ನಿರ್ಮಲೆ** ನೀವು ಈ ರೀತಿ ನಡೆಯಬಹುದೆಂದು ನನ್ನ ಮನಸ್ಸಿನಲ್ಲಿರಲಿಲ್ಲ.

**ವೆಂಕಟರಾವ್**.— ಮುಂದೆ ಸಾಗಲಿ. (ಎಂದು ಕೈಯಿಂದ ಸೂಚಿಸಿದರು; ಯಾವ ತಕರಾರನ್ನೂ ಮಾಡಲಿಲ್ಲ)

**ನಿರ್ಮಲೆ** ನಿಮ್ಮ ಪದವಿಯ ಮೇಲೆ ನಾನು ಅಭಿಮಾನವಿಟ್ಟೆನು. ನೀವು ನನಗೆ ವಿಶ್ವಾಸಘಾತ ಮಾಡಿದಿರಿ (ಸಿಟ್ಟಿನ ಭರದಲ್ಲಿದ್ದ ಅವಳಿಗೆ ತಾನುಏನು ಹೇಳುವೆನೆಂಬುದು ತಿಳಿಯಲಿಲ್ಲ)

**ವೆಂಕಟರಾವ್**:— ನಿರ್ಮಲೆ, ನಿನಗೆ ಅಂತಃಕರಣವಿರುವಂತೆ ತೋರುವದಿಲ್ಲ. ನಿನ್ನ ಹೃದಯವು ಶೂನ್ಯವಾಗಿದೆಯೋ?

**ನಿರ್ಮಲೆ:** ಹೇಗೊ? (ಅವಳು ಆರಾಮ ಕುರ್ಚಿಯ ಮೇಲೆ ಹೋಗಿ ಕೂತಳು.) ಕರಾರಿನ ಸಂಗತಿ ನಿಮಗೆ ತಿಳಿಯಲಿಲ್ಲವೇನು? ಅಂದ ಮೇಲೆ ಸುಮ್ಮನೆ ಅಷ್ಟುಸಾರಿ ಯಾಕೆ ಕೇಳುತ್ತೀರಿ!

ವೆಂಕಟರಾಯರಿಗೆ ಅವಮಾನವನ್ನು ಕೇಳಲಾಗದೆ ಅಲ್ಲಿಂದ ಎದ್ದು ತಮ್ಮ ಕೋಣೆಗೆ ಹೋಗಿ ಕೂತರು. ಇನ್ನು ಈ ಸ್ಥಳದಲ್ಲಿ (ಈ ಮನೆಯಲ್ಲಿ) ಇರುವುದು ಒಳ್ಳೆಯದಲ್ಲವೆಂದುಭಾವಿಸಿ ಸಾಮಾನುಗಳನ್ನು ಕಟ್ಟಲಾರಂಭಿಸಿದರು. ಯಾವ ಕಡೆಗೆ ಹೋಗಬೇಕೆಂಬುದು ಇನ್ನೂ ನಿಶ್ಚಯವಾಗಲಿಲ್ಲ. ಆದರೆ ಹೊರಡುವುದೇನೋ ನಿಶ್ಚಯವಾಗಿತ್ತು. ಸಾಮಾನುಗಳನ್ನು ಸಂಪಡಿಸುವುದರಲ್ಲಿ ಅರ್ಧಗಂಟೆ ಆಯಿತು. ಅಷ್ಟರಲ್ಲಿ ಅವರ ಸಿಟ್ಟು ಸ್ವಲ್ಪ ಕಡಿಮೆಯಾಯಿತು. ಕಾರಣ ನಿರ್ಮಲೆಯ ಅಪ್ಪಣೆಯನ್ನು ಪಡೆದು ಹೋಗಬೇಕೆಂದು ಅವಳ ಕೋಣೆಯಲ್ಲಿ ಪ್ರವೇಶಿಸಿದರು

ಅವಳು ಕೋಚಿನ ಮೇಲೆ ಬಿದ್ದುಕೊಂಡಿದ್ದಳು.

**ವೆಂಕಟರಾವ್:**—ನಿರ್ಮಲೆ, (ಎಂದು ಸೌಮ್ಯಸ್ವರದಿಂದ ಕರೆದರು)

**ನಿರ್ಮಲೆ:** (ಹುಬ್ಬುಗಂಟಿಕ್ಕಿ) ಏನು?

**ವೆಂಕಟರಾವ್:**— ನಾನು ನಿನ್ನ ನಿರೋಪವನ್ನು ತೆಗೆದುಕೊಳ್ಳಲು ಬಂದಿರುವೆನು. ಈಗ ಒಂದು ಕ್ಷಣಮಾತ್ರವೂ ಇಲ್ಲಿ ನಿಲ್ಲಲಾರೆ.

ನಿರ್ಮಲೆಯು ಮೇಲಕ್ಕೆ ಮುಖಮಾಡಿ ನೋಡಿದಳು.

**ವೆಂಕಟರಾವ್:**— ನಿನ್ನ ಮೇಲೆ ನನಗೆ ಪ್ರೇಮವಿದೆ. ನಿನ್ನ ಪ್ರೇಮದಿಂದ ನಾನು ಹುಚ್ಚನಾಗಿರುವೆನು. ಈ ಪ್ರೇಮದಿಂದಲೇ ನಿನ್ನ ಸಂಗಡ ಈ ರೀತಿ ನಡೆದೆನು ಮತ್ತು ನಿನ್ನ ಮನಸ್ಸಿನಂತೆ ನಡೆದೆನು. ನಿನಗೆ ದಯೆ ಬರಬಹುದೆಂಬ ಆಶೆಯು ನನಗಿತ್ತು. ಆ ಆಶೆ ಇವತ್ತಿಗೆ ಭಂಗವಾಯಿತು. ನಾನು ಖಂಡಿತವಾಗಿಯೂ ಇನ್ನು ನಿನ್ನ ಮನೆಯಲ್ಲಿ ಕಾಲಿಡಲಿಕ್ಕಿಲ್ಲ.

**ನಿರ್ಮಲೆ** — ಹೂಂ. ನಿಮ್ಮ ದೃಢನಿಶ್ಚಯವು ಸ್ಪಷ್ಟವಾಗಿದೆ.

**ವೆಂಕಟರಾವ್:**— ನಿರ್ಮಲೆ, ನಾನು ಹೊರಟೆನು.

**ನಿರ್ಮಲೆ.**— ಎಲ್ಲಿಗೆ?

**ವೆಂಕಟರಾವ್**:— ಮನಸ್ಸಿಗೆ ಬಂದಲ್ಲಿಗೆ!

**ನಿರ್ಮಲೆ**:— ಯಾವಾಗ?

**ವೆಂಕಟರಾವ್**:— ಈಗಲೇ! ನಾನು ಬಹುಶರವಾಗಿ ಬೆಂಗಳೂರಿಗೆ ಹೋಗುವೆನು. ಇವತ್ತಿನಿಂದ ನನ್ನ ನೆರಳು ಕೂಡಾ ಈ ಮನೆಯಲ್ಲಿ ಇರಲಾರದು.

**ನಿರ್ಮಲೆ**:— ಲೋಕಾಪವಾದವು ನನಗೆ ಬೇಡವಾಗಿದೆ.
(ಎಂದು ಕೋಚಿನ ಮೇಲಿಂದ ಎದ್ದು ಖುರ್ಚಿಯಮೇಲೆ ಕುಳಿತಳು.)

**ವೆಂಕಟರಾವ್**:— ಹೀಗೇನು? ಲೋಕಾಪವಾದಕ್ಕೆ ಅಷ್ಟೊಂದು ಆಲೋಚನೆಯೇ! ನಿನಗೆ ತಿಳಿದಂತೆ ಹೇಳು? ನಿನಗೆ ನಾನು ಬಿಟ್ಟು ಹೋದೆನೆಂದು ಹೇಳು! ನಮ್ಮಿಬ್ಬರಿಗೂ ಸರಿಬರುವುದಿಲ್ಲವೆಂದುಹೇಳು! ಹವಾಬದಲಾವಣೆಗೆ ಹೋಗಿರುವರೆಂದು ಹೇಳು!! ನನಗೆ ಅದರಿಂದ ಯಾವತೊಂದರೆಯೂ ಆಗಲಾರದು. ಮೇಲಿಂದಮೇಲೆ ನಿನಗೆ ಪತ್ರಬರೆದು ನನ್ನ ವಿಳಾಸವನ್ನೂ ಕ್ಷೇಮಸಮಾಚಾರವನ್ನೂ ತಿಳಿಸುತ್ತ ಇರುವೆನು. ನಾನು ನನ್ನ ಕರ್ತವ್ಯಕ್ಕೆ ಲೋಪತಂದುಕೊಳ್ಳಲಾರೆನು. ಪತಿಯ ಪತ್ರಗಳು ಬರುತ್ತಿರುವುದು ಲೌಕಿಕ ದೃಷ್ಟಿಯಿಂದ ನಿನಗೆ ಒಳ್ಳೆಯದು. ಪ್ರವಾಸದ ಖರ್ಚಿಗೋಸ್ಕರ ನಿನಗೆ ನಾನು, ತೊಂದರೆ ಕೊಡಲಾರೆ. ಅದರ ಅನುಕೂಲತೆಯನ್ನು ನನಗೆ ದೇವರು ಒದಗಿಸಿ ಕೊಟ್ಟಿರುತ್ತಾನೆ.

ಮೇಲ್ಕಂಡಮಾತುಗಳು ನಿರ್ಮಲೆಗೆ ಕೇಳಿದರೂ ಅವುಗಳ ತಾತ್ಪರ್ಯವು ಸಿಟ್ಟಿನ ಭರದಲ್ಲಿ ಅವಳಿಗೆ ಸರಿಯಾಗಿ ತಿಳಿದಿರಲಿಕ್ಕಿಲ್ಲ.

**ನಿರ್ಮಲೆ**:— ನೀವು ನಿಜವಾಗಿಯೂ ಹೋಗುವಿರೇನು?

**ವೆಂಕಟರಾವ್** :— ಈಗಲೇ ಹೊರಟೆನು. (ಘಡಿಯಾರವನ್ನು ನೋಡುತ್ತ ನಿರ್ಮಲೇ, ಹೋಗಿಬರುತ್ತೇನೆ. ಮೇಲಿಂದ ಮೇಲೆ ಪತ್ರ ಬರೆಯುತ್ತ ಇರುವೆನು. ನಿನಗೆ ನನ್ನ ಅವಶ್ಯಕತೆಯು ಉಂಟಾದಾಗ ನೀನು ನನ್ನನ್ನು ಅಪೇಕ್ಷಿಸಿದರೆ ನಾನು ನಿಶ್ಚಯವಾಗಿಯೂ ಬರುತ್ತೇನೆ, ಸಂತೋಷದಿಂದ ಬರುತ್ತೇನೆ, ತಿಳಿಯಿತೇ? (ಎಂದು ಹೇಳುವಾಗ ಅವರ ಕಂಠವು ಬಿಗಿದು ಕಣ್ಣಿನಲ್ಲಿ ನೀರಿನ ಹನಿಗಳು ತೊಟ್ಟಿಕ್ಕಿದವು.)

**ನಿರ್ಮಲೆ**— ಬನ್ನಿರಿ! (ಈ ಶಬ್ದವು ಅವಳ ಬಾಯಿಂದ ಸ್ಪಷ್ಟವಾಗಿ ಹೊರಡಲಿಲ್ಲ.) ನಿಮ್ಮ ಆ....ವ....ಶ್ಯ...ಕತೆಯು ಖಂಡಿತ ಉಂಟಾಗಲಾರದು

**ವೆಂಕಟರಾವ್**:— ದೈವ ಇಚ್ಛೆ ಇದ್ದಂತೆ ಆಗಲಿ. (ಕೋಣೆಯಿಂದ ಹೊರಬೀಳುವಾಗ) ಪುನಹ ಲಜ್ಜಾಹೀನನಂತೆ ಈ ವೆಂಕಟರಾಯನು ಎಂದೂ ಬರಲಾರನು. (ಎಂದು ಘಟ್ಟಿಯಾಗಿ ನುಡಿದರು.)

ಆಳು ಗಾಡಿಯನ್ನು ತಂದು ಸಾಮಾನುಗಳನ್ನು ಸರಿಪಡಿಸಿದನು. ವೆಂಕಟರಾಯರು ಗಾಡಿ ಹತ್ತಿದೊಡನೆ ಗಾಡಿಯು ಮುಂದೆ ಸಾಗಿತು. ಇದನ್ನು ನೋಡುತ್ತಿದ್ದ ನಿರ್ಮಲೆಯು ಕಣ್ಣಿನಲ್ಲಿ ನೀರು ಸುರಿಸಲಾರಂಭಿಸಿದಳು. ಅದು ಯಾಕಿರಬಹುದು? ದೇವರಿಗೇ ಗೊತ್ತು.

---

## ೧೯ನೆಯ ಪರಿಚ್ಛೇದ

### ಸಂಪೂರ್ಣ ಸ್ವಾತಂತ್ರ್ಯ.

ವೆಂಕಟರಾಯರು ಹೊರಟುಹೋದಮೇಲೆ ನಿರ್ಮಲೆಯು ಹೆಚ್ಚು ಕಾಲ ಉದಕಮಂಡಲದಲ್ಲಿರಲಿಲ್ಲ. ಈಗ ನಡೆದ ಸಂಗತಿಗಳೆಲ್ಲವೂ ಅವಳಿಗೆ ಸಮರ್ಪಕವಾಗಿದ್ದವೆಂದು ಹೇಳುವಂತಿರಲಿಲ್ಲ. ಯಾಕೆಂದರೆ ಆಗಾಗ ಅವಳ ಅಂತರಾತ್ಮನು ಅವಳನ್ನು ನಿಂದಿಸುತ್ತಿದ್ದನು. ಆದರೆ ಸ್ವಾತಂತ್ರ್ಯವು ದೊರೆತದ್ದರಿಂದ ಸ್ವಲ್ಪಮಟ್ಟಿಗೆ ಸಂತೋಷವಾಗಿತ್ತು. ಉದಕಮಂಡಲದಿಂದ ತನ್ನ ಮನೆಗೆ ಬಂದಳು. ಅಲ್ಲಿ ಅವಳಿಗೆ ಕೆಲಸವಿಲ್ಲದೆ ಬೇಜಾರಾದ್ದರಿಂದ ವಿನಾಯಕರಾಯನಿಗೆ ಎರಡು ದಿವಸಬಂದು ಇರಲು ಹೇಳಿಕಳಿಸಿದಳು.

ನಿರ್ಮಲೆಗೆ ಲಗ್ನವಾದಮೇಲೆ ಆ ಸಂಗತಿ ತಿಳಿದ ವಿನಾಯಕರಾಯರಿಗೆ ಅವಳ ಮೇಲಿನ ಮೊದಲಿನ ಪ್ರೇಮವು ಅಳಿದು ಹೋಗಿತ್ತು. ಮತ್ತು ಅವಳು ಯಾವಾಗಲೂ ತನ್ನ ಪ್ರೇಮವನ್ನು ವಿನಾಯಕರಾಯನಿಗೆ ಸೂಚಿಸಿರಲಿಲ್ಲ. ಆದಕಾರಣ ಈಗ ಅವಳಿಂದ ಆಹ್ವಾನ ಬಂದದ್ದು ಕಂಡು ಅವರಿಗೆ ಬಹಳ ಆಶ್ಚರ್ಯವಾಯಿತು.

## ೨೦ನೆಯ ಪರಿಚ್ಛೇದ.

### ದೈವಲೀಲೆ!

ಬಹಳ ಅಪಾಯ.! ಅವರ ವಿಚಾರ ಕೂಡಾ ಮಾಡುವದಕ್ಕೆ ಅವಶ್ಯಕತೆ ಇಲ್ಲ! ಈ ಪ್ರಕಾರವಾಗಿ ವಿನಾಯಕರಾಯನು ಗದ್ಗದ ಸ್ವರದಿಂದ ನುಡಿದನು.

ಶರದೃತುವಿನ ಕಾಲ; ಹಾಲಿನಂತೆ ಬೆಳದಿಂಗಳು ಬಿದ್ದಿರುವುದು. ಮನೆ ಮುಂಭಾಗದ ಅಂಗಳದಲ್ಲಿ ವಿಶ್ವಾಸರಾಯರು ಖುರ್ಚಿಯ ಮೇಲೆ ಕೂತು ಧೂಮ್ರಪಾನ ಮಾಡುತ್ತಿದ್ದರು. ಅಷ್ಟರೊಳಗೆ ವಿನಾಯಕರಾಯನ ಮೇಲಿನ ಶಬ್ದವು ಅವರ ಕಿವಿಗೆ ಕೇಳಿಸಿತು. ಆದರೆ ಅವನು ಏನು ಹೇಳುವನೋ ಅದರ ಅರ್ಥವು ಅವರಿಗಾಗಲಿಲ್ಲ. ಕಾರಣ ಅವರು ಮೇಲೆ ದೃಷ್ಟಿ ಇಟ್ಟು ಕೇಳಲಾರಂಭಿಸಿದರು.

ಬಹಳ ಅಪಾಯವು ( ಎಂದು ಪುನಃ ವಿನಾಯಕನು ಗಟ್ಟಿಯಾಗಿ ಕೂಗಿದನು )

**ವಿಶ್ವಾಸರಾವ್.**— ( ಆಶ್ಚರ್ಯಚಕಿತರಾಗಿ ಕೈಯೊಳಗಿನ ಸಿಗರೇಟನ್ನು ಬಿಸಾಟು ಖುರ್ಚಿಯಮೇಲಿಂದ ಎದ್ದು, ಪುನಃ ಕೂತು) ಏನು! ಆಗಿರುವುದೇನು? ಎಂದು ಕೇಳಿದರು.

**ವಿನಾಯಕರಾವ್.**— ನಾನು ನಿರ್ಮಲೆಯ ಹತ್ತಿರ ಹೋಗಿದ್ದೆನು. (ಎಂದು ಹೇಳಿ ಮುಖವನ್ನು ಕೆಳಗೆ ಮಾಡಿದನು. )

**ವಿಶ್ವಾಸರಾವ್:**— ಒಳ್ಳೇದು, ಇದು ನಿನ್ನ ನಿತ್ಯದ ಕೆಲಸವೇ ಆಗಿರುವುದು, ಮತ್ತೇನು ವಿಶೇಷ?

**ವಿನಾಯಕರಾವ್** — ಸುಮ್ಮನೆ ಚೇಷ್ಟೆ ಮಾಡಬೇಡಿರಿ. ಈಗ ಮೂರು ದಿವಸಗಳಿಂದ ನಾನು ಅವಳಲ್ಲಿಗೆ ಹೋಗಿರಲಿಲ್ಲ, ಸುಮ್ಮನೆ ಈ ದಿನ ಅಲ್ಲಿಗೆ ಹೋಗಿದ್ದೆನು.

**ವಿಶ್ವಾಸರಾವ್.**—( ನಗುತ್ತ ) ನೀನು ಹೋಗುವ ವಿಚಾರ ನನಗೆ ಗೊತ್ತು! ( ಎಂಬ ಸಂಶಯಾರ್ಥದ ಮಾತನ್ನು ಹೇಳಿದರು. )

**ವಿನಾಯಕರಾವ್**:— ಈ ಮೂರುದಿವಸದಲ್ಲಿ ಅವಳು ಕೆಂಪಗಿರುವಳೋ ಕಪ್ಪಾಗಿರುವಳೋ ಅದನ್ನು ನಾನು ಪರೀಕ್ಷಿಸಲಿಲ್ಲ. ಮೊನ್ನೆ ದಿವಸ ನಾನು ಅಲ್ಲಿಗೆ ಹೋದಾಗ್ಗೆ ಅವಳು ತಲೆನೋಯುವುದೆಂದು ಗೊಣಗುಟ್ಟುತ್ತಿದ್ದಳು. ಆದರೆ ಹೀಗಾಗುವುದೆಂದು ಯಾರಿಗೆ ಗೊತ್ತು! ನಾನಂತೂ ಈ ವರ್ತಮಾನ ಕೇಳಿ ... ( ಕೈಯೊಳಗಿನ ಕರವಸ್ತ್ರವನ್ನು ತೆಗೆದು ಮುಖವನ್ನು ಒರಸಿಕೊಂಡನು. )

**ವಿಶ್ವಾಸರಾವ್**: - ವಿನಾಯಕಾ, ಅದು ಏನು ಹೇಳು? ಸ್ಪಷ್ಟವಾಗಿ ಹೇಳಿಬಿಡು. ನಿರ್ಮಲೆಗೆ ಏನಾಗಿರುವುದು?

**ವಿನಾಯಕರಾವ್**:— ಹೇಳಲು ನನ್ನ ಬಾಯಿಯೇ ಬರದಂತಾಗಿದೆ

**ವಿಶ್ವಾಸರಾವ್**: — ಏನು? ಒಂದಾವರ್ತಿ ಹೇಳು, ನೋಡೋಣ? (ಮುಖವು ಕೆಂಪೇರಿ ಘಾಬರಿಯಾದರು. )

**ವಿನಾಯಕರಾವ್**:— ಹೇಳುವದೇನು? ನಿರ್ಮಲೆಗೆ ಸಿಡುಬು ಎದ್ದಿರುವುದು.

**ವಿಶ್ವಾಸರಾವ್**:— ( ಭಯದಿಂದ ) ಹೀಗೋ?

**ವಿನಾಯಕರಾವ್**:— ನಾನು ಆಶ್ರಮಕ್ಕೆ ಹೋದಕೂಡಲೆ ಈ ಸುದ್ದಿಯು ನನಗೆ ತಿಳಿಯಿತು.

**ವಿಶ್ವಾಸರಾವ್**:— ಅವಳು ಆಶ್ರಮದಲ್ಲಿಯೇ ಇರುವಳಲ್ಲವೆ?

**ವಿನಾಯಕರಾವ್** : - ಆಶ್ರಮದಲ್ಲಿ ಹೇಗೆ ಇರುವುದು; ಅದು ಸಾಂಕ್ರಾಮಿಕ ಜಾಡ್ಯವಲ್ಲವೆ? ಕಾರಣ ಅವಳನ್ನು ಔಷಧಾಲಯದ ವಾರ್ಡಿನಲ್ಲಿಟ್ಟಿರುತ್ತಾರೆ. ಬಹಳ ಕೆಟ್ಟ ಜಾಡ್ಯವಿದೆ. ಈ ರೋಗಕ್ಕೆ ಜನರು ಬಹಳ ಅಂಜಿಕೊಳ್ಳುತ್ತಾರೆ. ಅವಳನ್ನು ಅಲ್ಲಿಗೆ ತೆಗೆದುಕೊಂಡು ಹೋದಮೇಲಂತೂ ನನಗೆ ಏನೂ ತಿಳಿಯದ ಹಾಗಾಗಿದೆ.

**ವಿಶ್ವಾಸರಾವ್**: - ಹಾಗಾಗುವುದು ಸ್ವಾಭಾವಿಕವೆ!

**ವಿನಾಯಕರಾವ್**:-- ಆದರೆ ತಾರುಣ್ಯದಲ್ಲಿ ಸಿಡುಬು ಏಳುವದು ಅಪಾಯಕರವಲ್ಲವೆ?

**ವಿಶ್ವಾಸರಾವ್**:-- ನೀನು ಹೇಳುವುದೇನೋ ನಿಜ; ಅದಕ್ಕೆ ನೀನೂ ನಾನೂ ಏನು ಮಾಡಬಹುದು? ಅದರಲ್ಲೂ ನಿನಗೆ ಕೆಟ್ಟದಾಗಿ ಕಾಣಲು ಒಂದು ಕಾರಣವುಂಟು. ಅದೇನೆಂದರೆ ನಿನಗೆ ಹೆಂಗಸರಲ್ಲಿ ಕನಿಕರ ಬಹಳವಲ್ಲವೆ?

**ವಿನಾಯಕರಾವ್**.-- ಹಾಗಲ್ಲ; ಎರಡನೆಯವರ ದುಃಖದಲ್ಲಿ ಅನುತಾಪವನ್ನು ತೋರಿಸುವುದು ಮನುಷ್ಯಧರ್ಮವಾಗಿರುವುದು!

**ವಿಶ್ವಾಸರಾವ್**:-- ( ವಿನಾಯಕರಾಯನಕಡೆ ನೋಡಿ ) ಸಿಡುಬು ಏಳುವುದರಿಂದ ಮನುಷ್ಯನ ಅಂಗಗಳೆಲ್ಲ ವಿಕಾರವಾಗುವುದಿಲ್ಲವೆ? ನಿನ್ನ ಮತ್ತು ಅವಳ ಲಗ್ನವು ಕೂಡಿ ಬರದೇ ಇದದ್ದು ಈಗ ಒಳ್ಳೇದಾಯಿತಲ್ಲವೇ?

**ವಿನಾಯಕರಾವ್** :— ಹೌದು. ( ಮುಖವನ್ನು ಕೆಳಗೆ ಮಾಡಿದನು ).

**ವಿಶ್ವಾಸರಾವ್** :— ( ಡಾಕ್ಟರರು ವಿಷಯವನ್ನು ಒದಲಿಸಿ ) ಈಗ ವೇಳೆಯಾಯಿತು. ನಾಳೆ ಅಲ್ಲಿಗೆ ಹೋಗುತ್ತೇನೆ. ಅನಾಥಾಲಯದಲ್ಲಿ ರೋಗಿಗಳಿಗೆ ಸರಿಯಾಗಿ ಉಪಚಾರ ಮಾಡುವರೆಂದೂ ಈಚೆಗೆ ಹೊಸ ಸಮೂನೆಯಿಂದ ಔಷಧೋಪಚಾರ ನಡೆಸುತ್ತಾರೆಂದೂ ವರ್ತಮಾನ ಪತ್ರದಲ್ಲಿ ನಿನ್ನೆ ಓದಿರುತ್ತೇನೆ.

ವಿಶ್ವಾಸರಾಯರು ಮಲಗಲು ಹೋದರು ಸ್ವಲ್ಪ ಹೊತ್ತಿನಲ್ಲಿ ವಿನಾಯಕರಾಯನು ಮಲಗಲು ಹೊರಟು ಹೋದರು. ಆದರೆ ಅವರಿಗೆ ನಿದ್ರೆಯೇ ಬರಲಿಲ್ಲ. ಯಾಕೆಂದರೆ ನಿರ್ಮಲೆಯ ಮುದ್ದುಮುಖವು ಸಿಡುಬಿನಿಂದ ಎಲ್ಲಿ ವಿಕಾರವಾಗುವುದೋ ಅಥವಾ ಕಣ್ಣಲ್ಲಿ ಎದ್ದು ಕಣ್ಣು ಎಲ್ಲಿ ಕುರುಡಾಗುವುದೋ ಇವೇ ಮುಂತಾದ ವಿಚಾರಗಳು ಮನಸ್ಸಿನಲ್ಲಿ ಬರಲಾರಂಭಿಸಿದವು. ಅದರಿಂದ ನಿದ್ರಾದೇವಿಯು ರಜೆ ತೆಗೆದುಕೊಂಡದ್ದು ಆಶ್ಚರ್ಯವಲ್ಲ! ಅದರಲ್ಲೂ ಕೂಡ ಚಿಕ್ಕಂದಿನಿಂದ ಕೂಡಿ ಆಟಪಾಟಗಳಲ್ಲಿ ಜೊತೆಯಿಂದ ಇದ್ದ ವಿನಾಯಕನಿಗೆ ಚಿಂತೆಯಾಗುವುದು ಸ್ವಾಭಾವಿಕವು. ನಿರ್ಮಲೆಯ ರೂಪು ನೋಡಿದವರಿಗೂ ವ್ಯಸನವಾಗುವದರಲ್ಲಿ ಏನೂ ಆಶ್ಚರ್ಯವಲ್ಲ.

ನಿರ್ಮಲೆಯು ಮನೆಯಲ್ಲಿಯೇ ಮಲಗಿಕೊಳ್ಳಬೇಕಾದುದರಿಂದ ಮನಸ್ಸು ತುಂಬಾ ಜಿಗುಪ್ಸೆಯಾಗಿ ದಿನಗಳು ( ಕಾಲವು ) ಎಷ್ಟು ನಿಧಾನವಾಗಿ ಹೋಗುವುವು? ಎಂದು ಮನಸ್ಸಿನಲ್ಲಿ ಗೊಣಗುಟ್ಟುತ್ತಿದ್ದಳು.

ಸಿಡುಬು ಸ್ವಲ್ಪ ಬತ್ತಿದೊಡನೆ ಅವಳು ಮಠಾಶ್ರಮವನ್ನು ಬಿಟ್ಟು ರಾಧಾಸದನಕ್ಕೆ ಹೋದಳು. ಅನಾಥಾಲಯದ ಮಾಲಕರು ನೀಲಗಿರಿಗೆ ಹೋದರೆ ಒಳ್ಳೆಯದೆಂದು ಹೇಳಿದ್ದರು. ಆದರೆ ಅವಳು ನೀಲಗಿರಿಗೆ ಹೋಗದೆ ರಾಧಾಸದನಕ್ಕೆ ಹೋಗುವುದನ್ನು ನಿಶ್ಚಯಿಸಿದಳು. ಕಾರಣವನ್ನು ಅವಳು ಹೇಳುವಂತಿರಲಿಲ್ಲ ದುಃಖದಿಂದ ಕೂಡಿದವರೂ, ನಿರಾಶೆಯುಳ್ಳವರೂ ದುಃಖದ ಸಮಯದಲ್ಲಿ ತಮ್ಮ ಸ್ವಂತ ಮನೆಗೆ ಹೋಗುವುದು ಮನುಷ್ಯನ ಸ್ವಾಭಾವಿಕಗುಣವು. ಆದರಂತೆ ನಿರ್ಮಲೆಯು ತನ್ನ ಮನೆಗೆ ಹೋದಳು.

ಸಿಡುಬು ಎದ್ದು ಮುಖದಮೇಲೆ ಕಲೆಕೂತದ್ದರಿಂದ ಅವಳಿಗೆ ತುಂಬಾ ದುಃಖವಾಗಿತ್ತು ಯಾಕೆಂದರೆ ಅವಳ ಸೌಂದರ್ಯದಲ್ಲಿ ಖಾಯಂ ಆದ ಬದಲಾವಣೆಯು ಆಗಿತ್ತು ಮತ್ತು ಸೌಂದರ್ಯದಲ್ಲಿ ಅವಳಿಗೆ ತುಂಬಾ ಹೆಮ್ಮೆ ಇದ್ದುದರಿಂದ ವಿಶ್ವಪ್ರಯತ್ನಪಟ್ಟು ಕಲೆಗಳನ್ನು ನಾಶಪಡಿಸಲು ಹಣವ್ಯಯ ಮಾಡಿದಳು. ಆದರೆ ಅದರಿಂದ ಅಷ್ಟೊಂದು ಪ್ರಯೋಜನವಾಗಲಿಲ್ಲ.

ಅನಾಥಾಲಯದಲ್ಲಿರುವಾಗ ಅವಳು ಆಗಾಗ ಡಾಕ್ಟರರನ್ನು ಉದ್ದೇಶಿಸಿ, ನನ್ನ ರೂಪು ಮೊದಲಿನಂತೆ ಆಗಬಹುದೇ? ಎಂದು ಪ್ರಶ್ನಿಸುತ್ತಿದ್ದಳು. ಮತ್ತೆ ಔಷಧಿಯಾವುದು? ಅದರಿಂದ ಗುಣವಾಗಬಹುದೇ? ಹ್ಯಾಗಾದರೂ ಮಾಡಿ ನನ್ನ ರೂಪಿನಲ್ಲಿ ಬದಲಾವಣೆಮಾಡಿರಿ. ಎಂದು ಬಹುಪರಿಯಾಗಿ ಡಾಕ್ಟರರಿಗೂ, ಪರಿಚಾರಕರಿಗೂ ಬೇಡಿಕೊಳ್ಳುವಳು. ಅವರು ಶಕ್ತಿಮೀರಿ ಉಪಚಾರ ಮಾಡಿದ್ದರಿಂದ ಮುಖದಲ್ಲಿ ಅಷ್ಟೇನು ಬದಲಾವಣೆಯಾಗದಿದ್ದರೂ ಸ್ವಲ್ಪ ಕಲೆಗಳು ಮಾತ್ರ ಉಳಿದವು. ಆದರೆ ದೇವರ ದಯೆಯಿಂದ ಅಂಗ ವ್ಯತ್ಯಾಸ ಮಾತ್ರ ಆಗಲಿಲ್ಲ. ಮೊದಲಿನ ರೂಪು ಹೋಗಿ ಸಾಮಾನ್ಯಜನ ರಲ್ಲಿ ಅವಳೂ ಒಬ್ಬಳಂತೆ ಆದಳು.

ಅವಳು ಅನಾಥಾಲಯದಲ್ಲಿರುವಾಗ ಮೊದಲಿನ ಎರಡು ವಾರದವರೆಗೆ ಅವಳ ಮಿತ್ರಮೈತ್ರಿಣಿಯರಿಂದ ಕಾಗದಗಳು ಬರುತ್ತಲೇ ಇದ್ದುವು. ಆದ

ರಲ್ಲೂ ಕವಿನಾಟಿಯವರು ಇವಳ ಆರೋಗ್ಯದ ವಿಚಾರದಲ್ಲಿ ತುಂಬಾ ನಿಗಾವಹಿಸಿದ್ದರು. ಆದರೆ ಅವಳು ರಾಧಾಸದನಕ್ಕೆ ಹೋದಮೇಲೆ ಯಾವ ಇಷ್ಟ ಮಿತ್ರರಿಂದಲೂ ಅವಳಿಗೆ ಒಂದು ಕಾಗದಕೂಡಾ ಬರಲಿಲ್ಲ. ಮತ್ತೆ ಅವಳ ಭೇಟಿಗೂ ಬರಲಿಲ್ಲ. ಪೂರ್ವದ ಇಷ್ಟ ಮಿತ್ರರಿಗೆ ಅವಳೇ ಪತ್ರ ಬರೆದಳು. ಆದರೂ ಒಬ್ಬರೂಬರಲಿಲ್ಲ. ಅವಳಿಗೆ ಮೊದಲಿನಂತೆ ಮಾತಾಡಲು ಆರಾಮಾ ಜನರು ಬೇಕಾಗಿತ್ತು. ಮೊದಲು ಅವಳ ರೂಪಕ್ಕೆ ಮರುಳಾಗಿ ತಾವಾಗಿಯೇ ಬಂದು ಮಾತಾಡಿ, ಇವಳ ಸ್ತೋತ್ರಮಾಡಿ ಹೋಗುತ್ತಿದ್ದರು. ಆದರೆ ಈಗ ಅದರ ವಿಪರೀತವಾಗಿ ಒಬ್ಬರೂ ಬಾರದಂತಾಯಿತು. ಪತ್ರಕ್ಕೆ ಕೆಲವರು ಯಾವ ಗೌರವವನ್ನೂ ಕೊಡಲಿಲ್ಲ. ಇನ್ನು ಕೆಲವರು ಬರಲಾಗದ್ದಕ್ಕೆ ಏನೋ ಕಾರಣಗಳನ್ನು ನೆಪಮಾಡಿ ಪತ್ರಬರೆದಿದ್ದರು. ಕೊನೆಗೆ ನಿರುಪಾಯಳಾಗಿ ವಿನಾಯಕರಾಯನಿಗೆ ಈ ಕೆಳಗಿನಂತೆ ಕಾಗದ ಬರೆದಳು. ಈ ಪತ್ರ ನೋಡಿಮೊಡನೆ ನೀನು ಹೊರಟುಬರಬೇಕು. ಇಲ್ಲದಿದ್ದರೆ ನಾನು ಈ ಅಜ್ಞಾತವಾಸಕ್ಕೆ ಬೇಜಾರಾಗಿ ಪ್ರಾಣತೆಗೆದುಕೊಳ್ಳಬೇಕಾಗುವುದು. ಬೇರೆಕಡೆ ಪ್ರಯಾಣಹೋಗುವ ಸಂಭವವಿದ್ದರೆ ಅಲ್ಲಿಗೆ ಬರಲಾಗುವುದಿಲ್ಲವೆಂದುತಿಳಿಸು. ನೀನು ನನ್ನ ಆಮಂತ್ರಣೆಯ ಮಾರ್ಗವನ್ನೇ ನಿರೀಕ್ಷಿಸುತ್ತಿರುವಂತೆ ಕಾಣುತ್ತದೆ. ನಿನ್ನಮೇಲೆ ನನಗೆ ಬಹಳವಾಗಿ ಸಿಟ್ಟುಬಂದಿರುತ್ತದೆ.

ಹುಚ್ಚು ಬಾಲಕೆ, ಸಿಡುಬು ಎದ್ದು ವಿಕಾರವಾದ ತರುಣಿಯ ಸಿಟ್ಟಿಗೆ ಬುದ್ಧಿವಂತ ತರುಣರು ಹೆಚ್ಚು ಮಹತ್ವಕೊಡುವದಿಲ್ಲವೆಂದು ಅವಳಿಗೆ ತಿಳಿದಿರಲಿಕ್ಕಿಲ್ಲ! ನಿರ್ಮಲೆಯ ಪತ್ರವನ್ನು ನೋಡಿ ವಿನಾಯಕರಾಯನಿಗೆ ಬಹಳ ಕೋಪಬಂದಿತು. ಅವನಿಗೆ ಬೇರೆಕಡೆ ಹೋಗುವ ಕೆಲಸವಿಲ್ಲದಾಗೆಲ್ಲ ಸಂತೋಷದಿಂದ ರಾಧಾಸದನಕ್ಕೆ ಹೋಗುತ್ತಿದ್ದರು. ಆದರೆ ಪೂರ್ವದ ರಾಧಾಸದನಕ್ಕೂ ಈಗಿನ ರಾಧಾಸದನಕ್ಕೂ ಬಹಳ ಹೆಚ್ಚುಕಡಿಮೆಯಾಗಿತ್ತು. ( ಪತ್ರವನ್ನೋದಿ ತನ್ನ ಮನಸ್ಸಿನೊಳಗೆ ವಿನಾಯಕರಾಯರು ) ಇವಳು ಇಷ್ಟು ಕಲಿತವಳಾಗಿ ಜನರು ತನ್ನಭೆಟ್ಟಿಗೆ ಯಾಕೆ ಬರುವುದಿಲ್ಲವೆಂಬುದನ್ನು ತಿಳಿಯಲಾರದವಳಾದಳೇ ? ನಾವು ಅದನ್ನು ಹೇಳುವುದೂ ಒಳ್ಳೆಯದಲ್ಲ. ಆಕೆ ಕೇಳುವುದೂ ಅಸಹ್ಯ; ಆದ್ದರಿಂದ ಅದನ್ನು ಅವಳೇ ಮನಸಿನಿಂದ ತಿಳಿಯಬೇಕು.

ವಿನಾಯಕರಾಯರು ಸ್ವಲ್ಪ ಆಲೋಚಿಸಿ ಸಾಯಂಕಾಲ ನಾಲ್ಕು ಘಂಟೆಗೆ ಬರುತ್ತೇನೆಂದು ಟೆಲಿಫೋನಿನಿಂದ ತಿಳಿಸಿದರು. ಅವಳು ಹೇಳಿಕಳುಹಿಸಿರುವದರಿಂದ ಹೋಗಬೇಕು! ಮತ್ತೆ ಅವಳ ಪ್ರಕೃತಿಯ ವಿಚಾರವಾಡಿ ಊರಲ್ಲಿ ಬಂದಿರುವ ನಾಟಕದ ವಿಚಾರವಾಗಿ ಸಂಭಾಷಣೆ ಮಾಡುತ್ತಾ ನಿನ್ನ ರೂಪು ಮೊದಲಿನಂತೆ ಇದೆ! ವಗೈರೆ ಅವಳ ಗುಣಕಥನಮಾಡಿ ಹೇಗಾದರೂ ಒಂದುತಾಸುಹೊತ್ತು ಕಾಲಹರಣಮಾಡಿ ಬರಬೇಕೆಂದು ವಿಚಾರಮಾಡಿದರು.

ಪಾಪ! ಇಂಥಸ್ಥಿತಿಯಲ್ಲಿ ಅವಳಿಗೆ ಪತಿಯವಿನಹ ಮತ್ತ್ಯಾರಿದ್ದಾರು? ಆದರೆ ಅವಳಪತಿಯು ಇರುವ ಸ್ಥಳವನ್ನು ಹೇಳುವವರಾರು? ನೀಲಗಿರಿಯಿಂದ ಹೊರಟು ಹೋಗುವಾಗ ಹೇಳಿದಪ್ರಕಾರ ವೆಂಕಟರಾಯರು ಆಗಾಗ ಅವಳಿಗೆ ಪತ್ರಬರೆಯುತ್ತಲೇ ಇದ್ದರು. ಪತ್ರದಲ್ಲಿ ಬರೇ ಕ್ಷೇಮಸಮಾಚಾರ ಮತ್ತು ವಿಳಾಸ ಇಷ್ಟೆ. ಎರಡುಸಾಲುಮಾತ್ರ ಬರೆಯುತ್ತಿದ್ದರು. ಅದಾದರೂ ಮನಸ್ಸುಬಂದಾಗ ಬರೆಯುತ್ತಿದ್ದರು. ನಿರ್ಮಲೆಯೂ ಅವರಂತೆ ಅದಕ್ಕೆ ಸರಿಯಾಗಿ ಜವಾಬು ಬರೆಯುತ್ತಿದ್ದಳು. ಸಾರಾಂಶ ಈ ಪತ್ರವ್ಯವಹಾರದಿಂದ ಉಭಯತರಿಗೂ ಅವರವರ ವಿಳಾಸಮಾತ್ರ ತಿಳಿಯುತ್ತಾ ಇತ್ತು. ಇಷ್ಟೇ!

ಸಾಯಂಕಾಲ ನಾಲ್ಕುಘಂಟೆಗೆ ಸರಿಯಾಗಿ ವಿನಾಯಕರಾಯರು ರಾಧಾಸದನಕ್ಕೆ ಹೊರಟರು. ನಿರ್ಮಲೆಯು ಅವರ ಆಗಮನವನ್ನೇ ನೋಡುತ್ತಾ ಇದ್ದಳು. (ವಿನಾಯಕರಾಯರನ್ನು ಕಂಡೊಡನೆ ಆನಂದದಿಂದ) ನೀನು ಬಂದದ್ದು ಬಹಳ ಒಳ್ಳೆಯದಾಯಿತು.

**ವಿನಾಯಕರಾವ್**:—ನಾನು ಬಂದದ್ದು? (ಅವಳ ಮುಖವನ್ನು ಸ್ವಲ್ಪ ವಕ್ರದೃಷ್ಟಿಯಿಂದ ನೋಡಿ ಸುಮ್ಮನಾದರು)

**ನಿರ್ಮಲೆ**:—ಬನ್ನಿರಿ. ಈ ಕಡೆ ಕೂತುಕೊಳ್ಳಿರಿ. (ತನ್ನ ಮುಖವನ್ನು ನಾಜೂಕು ದೃಷ್ಟಿಯಿಂದ ನೋಡಬಹುದೆಂದು ಮನಸ್ಸಿನಲ್ಲಿ ಮೊದಲೇ ಅವಳು ಯೋಚಿಸಿದ್ದಳು.) ನನಗೆ ಇಲ್ಲಿ ಜೀವನಕ್ಕೆ ಬಹಳ ಬೇಸರಿಕೆಬಂದಿದೆ; ಊರಲ್ಲಿ ವಿಶೇಷವೇನು? ಕಮೀಟಿಯ ಕೆಲಸಗಳು ಹೇಗೆ ನಡೆದಿವೆ? ಇಲ್ಲಿ ನನಗೆ ಯಾವ ಕೆಲಸವೂ ಇಲ್ಲವಾಗಿದೆ.

ವಿನಾಯಕರಾಯರು ಅವಳ ಸಮೀಪದಲ್ಲಿಯೇ ಒಂದು ಖುರ್ಚಿಯಮೇಲೆ ಕುಳಿತಿದ್ದರು. ಜೇಬಿನಿಂದ ಘಡಿಯಾರ ತೆಗೆದುನೋಡಲು ತಾನು ಹೊಡ ಬೇಕೆಂದು ನಿಶ್ಚಯಿಸಿದ ಕಾಲಕ್ಕೆ ಇನ್ನು ಒಂದುತಾಸು ಮಾತ್ರ ಅವಕಾಶ ಉಳಿದಿತ್ತು.

**ವಿನಾಯಕರಾವ್** — ಹೌದು. ನಿಜವಾಗಿಯೂ ನಿನಗೆ ಇಲ್ಲಿ ಬೇಜಾರಾಗುತ್ತಿರಬಹುದು ಕಾಹಿಲೆಯಲ್ಲಿರುವಕಾಲಕ್ಕಿಂತಲೂ ಶಕ್ತಿವಂತ ರಾಗುವ(ವಿಶ್ರಾಂತಿಪಡೆವ) ಕಾಲವನ್ನು ಕಳೆವುದು ತುಂಬಾ ಕಷ್ಟವಾಗುತ್ತದೆ. ನಿನ್ನಬಾಕಿ ಎಲ್ಲಾ ಆರೋಗ್ಯವಷ್ಟೇ? ( ಸ್ವಲ್ಪಹೊತ್ತು ಇಬ್ಬರೂ ಮಾತನ್ನೇ ಆಡಲಿಲ್ಲ. ಸ್ವಲ್ಪಹೊತ್ತಿನಮೇಲೆ )

**ನಿರ್ಮಲೆ** — ನನ್ನ ಮುಖವು ಎಷ್ಟು ವಿಕಾರವಾಗಿದೆ? ( ಎಂಬ ಶಬ್ದವು ಬಹಳ ಕಷ್ಟದಿಂದ ಹೊರಟಿತು. )

( ವಿನಾಯಕರಾಯನಿಗೆ ಏನು ಹೇಳಬೇಕೆಂಬುದೇ ತೋಚಲಿಲ್ಲ. ಆದರೂ ನಿಧಾನದಿಂದ )

**ವಿನಾಯಕರಾವ್**:— ನಿನ್ನ ಮುಖವು ಅಷ್ಟೇನೂ ವಿಕಾರವಾಗಿರುವು ದಿಲ್ಲ! ಈ ಜಾಕೀಟನ್ನು ಹೊಸದಾಗಿ ಹೊಲಿಸಿದಂತೆ ತೋರುವುದಲ್ಲವೇ? ನಿನಗೆ ಬಟ್ಟೆಗಳ ಮೇಲೆ ಬಹಳ ಪ್ರೀತಿಯಲ್ಲವೆ?

**ನಿರ್ಮಲೆ** — ಹೇಗಾದರೂ ಕಾಲಕಳೆಯಬೇಕಲ್ಲವೆ?

**ವಿನಾಯಕರಾವ್**:— ಆಹಾ! ಈ ಚೀಟಿನಬಣ್ಣ ಎಷ್ಟು ಶೋಭಾಯ ಮಾನವಾಗಿದೆ ಮತ್ತೆ ಅದು ನಿನಗೆ ಎಷ್ಟು ಚೆನ್ನಾಗಿ ಒಪ್ಪುವುದಲ್ಲ! ಬಟ್ಟೆ ಗಳನ್ನು ಚುನಾಯಿಸುವುವರಲ್ಲಿ ನೀನು ತುಂಬಾ ಚದುರೆ.

ನಿರ್ಮಲೆಯು ಸೂಕ್ಷ್ಮದೃಷ್ಟಿಯಿಂದ ವಿನಾಯಕರಾಯನ ಮುಖವನ್ನು ನೋಡುತ್ತಾ ಇದ್ದಳು.

**ವಿನಾಯಕರಾವ್**:— ನಿನ್ನ ಪತ್ರದಪ್ರಕಾರ ಇಲ್ಲಿಗೆ ಯಾರೂ ಬರು ವಂತೆ ತೋರುವುದಿಲ್ಲ! ಅಲ್ಲವೆ?

**ನಿರ್ಮಲೆ**:— ನಾನು ಇಲ್ಲಿಗೆ ಬಂದು ಒಂದುಒಂದೂವರೆ ತಿಂಗಳಾ ಯಿತು. ಇದೂವರೆಗೆ ಯಾರೂ ಇಲ್ಲಿಗೆ ಬಂದಿರುವುದಿಲ್ಲ. ಆದರೆ ನಿನ್ನ

ಪತ್ರಕ್ಕೆ ಗೌರವಕೊಟ್ಟು ನೀನು ಬಂದದ್ದು ನನ್ನ ಸೌಭಾಗ್ಯವೇಸರಿ. ( ಎಂದು ನಕ್ಕಳು. ಅವಳ ಮೊದಲಿನ ನಗುವಿಕೆಗೂ ಈಗಿನ ನಗುವಿಕೆಗೂ ತುಂಬಾ ವ್ಯತ್ಯಾಸವಾಗಿತ್ತು. ಈ ವ್ಯತ್ಯಾಸವು ವಿನಾಯಕನ ಮನಸ್ಸಿಗೆ ಹೊಳೆಯದೇ ಇರಲಿಲ್ಲ. ಮುಖದಮೇಲೆ ದೇವಿಯ ಕಲೆಗಳಿದ್ದುದರಿಂದ ಅವಳ ನಗುವಿಕೆ ಯಲ್ಲಿ ಮೊದಲಿನಂತೆ ಮೋಹಕತ್ವವು ಇರಲಿಲ್ಲ. ಆದರೆ ಮಾತಿನ ಚತುರತೆ ಯಲ್ಲಿ ಬದಲಾವಣೆಯಾಗಿರಲಿಲ್ಲ. ನಿರ್ಮಲೆಯು ನಗುತ್ತಾ ನಗುತ್ತಾ) ನೀನು ಮೊದಲೇ ಇಲ್ಲಿಗೆ ಬರಬೇಕಾಗಿತ್ತು. ನಿಜವಾಗಿಯೂ ನನಗೆ ಇಲ್ಲಿ ತುಂಬಾ ಜಿಗುಪ್ಸೆಯುಂಟಾಗಿದೆ.

ವಿನಾಯಕರಾಯನಿಗೆ ಅವಳ ಮಾತಿನಕಡೆಗೆ ಲಕ್ಷ್ಯವಿರಲಿಲ್ಲ. ಆದಷ್ಟು ಬೇಗ ಅಲ್ಲಿಂದ ಹೊರಡುವ ಆಲೋಚನೆಯಲ್ಲಿದ್ದರು.

**ನಿರ್ಮಲೆ:—** (ಹುಬ್ಬುಗಂಟಿಕ್ಕಿ) ಎಷ್ಟೋ ಜನರಿಗೆ ಪತ್ರಬರೆದನು. ಒಬ್ಬರಾದರೂ ಬಂದಿದ್ದರೆ ಆಣೆ. ನೀನು ಬಂದದ್ದು ನನಗೆ ಎಷ್ಟೋ ಸಂತೋಷವಾಗಿದೆ. ಬಂದುದಕ್ಕೆ ಸರಿಯಾಗಿ ಇನ್ನೂ ನಾಲ್ಕು

**ವಿನಾಯಕರಾವ್:**— ನಿಜ; ಇರಬಹುದಾಗಿತ್ತು: ಆದರೆ ಅನುಕೂಲವಿಲ್ಲ. ಐದುಮೂವತ್ತಕ್ಕೆ ಬರುವ ರೈಲಿಗೆ ನಾನು ಹೋಗಲೇಬೇಕು. ನಿನ್ನ ಯೋಗಕ್ಷೇಮ ವಿಚಾರಿಸಿ ಹೋಗಬೇಕೆಂದು ಮಾತ್ರ ಬಂದೆ.

**ನಿರ್ಮಲೆ:—** ( ಕೋಪದಿಂದ ) ವಿನಾಯಕ, ನಾನು ನಿನಗೆ ಇಲ್ಲಿಗೆ ಬರಲು ಕಾಗದ ಬರೆದಿದ್ದೆನು. ನೀನು ಅದಕ್ಕೆ ಸಮ್ಮತಿಸಿ ಕಾರುಬಾರು ಮಾಡಿದ್ದೆ ?

**ವಿನಾಯಕರಾವ್:—** ಹೌದು. ಹಾಗೆಂದು ಇಲ್ಲಿ ವಸ್ತಿಮಾಡಲು ಬರುತ್ತೇನೆಂದು ನಾನು ಬರೆದಿರುವುದಿಲ್ಲ.

ಈಗ ನಿರ್ಮಲೆಗೆ ಹೆಚ್ಚಾಗಿ ಕೋಪಬಂದಿತು. ಇಷ್ಟು ಕಠಿಣವಾದ ಉತ್ತರವನ್ನು ಇದುವರೆಗೂ ಅವಳಿಗೆ ಯಾರೂ ಕೊಟ್ಟಿರಲಿಲ್ಲ. ಈ ಸಂಗತಿ ವಿನಾಯಕರಾಯನಿಗೂ ಗೊತ್ತಿತ್ತು. ಆದರೆ ದೇವಿಯು ಪರಿಸ್ಥಿತಿಯನ್ನು ಬದಲಾಯಿಸಿದ್ದಳು. ಅದು ಅವಳಿಗೆ ತಿಳಿಯಲೇಬೇಕಾಗಿತ್ತು.

**ನಿರ್ಮಲೆ:**— ನೀವು ಹೊರಡಲು ಇನ್ನು ಎಷ್ಟು ವೇಳೆ ಇದೆ?

**ವಿನಾಯಕರಾವ್.**— ಗಾಡಿಬರಲು ಇನ್ನೇ ಇಪ್ಪತ್ತೈದು ನಿಮಿಷವಿದೆ.

**ನಿರ್ಮಲೆ.**— ಐದು ಮೂವತ್ತೈದಕ್ಕೆ ಹೋಗುವಿರೋ?

**ವಿನಾಯಕರಾವ್:**— ಹೌದು.

**ನಿರ್ಮಲೆ**— ಹೌದೋ?

**ವಿನಾಯಕರಾವ್:**— ನಿಜವಾಗಿಯೂ ಹೌದು

ವಿನಾಯಕನ ಮಾತಿನ ಅರ್ಥವನ್ನು ಅವಳು ತಿಳಿದುಕೊಂಡಳು. ಕಾಫಿ ತರಲು ಹೇಳುವಾ ಅಂದರೆ ಅದಕ್ಕೂ ಅವಕಾಶವಿರಲಿಲ್ಲ. ನಿರ್ಮಲೆಯ ಮನಸ್ಸಿಗೆ ತುಂಬಾ ವ್ಯಥೆಯುಂಟಾಯಿತು. ಮತ್ತೆ ಏತಕ್ಕೋಸ್ಕರ ಇವನು ನಿಲ್ಲುವುದಿಲ್ಲವೆಂಬುದೂ ಅವಳಿಗೆ ಗೊತ್ತಾಯಿತು.

ಅಷ್ಟರಲ್ಲಿ ಪರಿಚಾರಿಕೆಯು ಕಾಫಿತಂದಳು. ಕಾಫಿಕುಡಿಯುವಾಗ ಕಮಿಟಿಯ ಮುಖಾಂತರ ಪ್ರಸಿದ್ಧಿಸಲ್ಪಟ್ಟ ಎರಡು ಹೊಸ ಪುಸ್ತಕಗಳ ವಿಚಾರವಾಗಿಯೂ ಮತ್ತು ಕಮಿಟಿಯ ಆಶ್ರಯದಿಂದ ಸ್ತ್ರೀ ಕಲಾಪ್ರದರ್ಶನ ನಡೆಯಿಸಿದ ಸಂಗತಿಯನ್ನು ಸವಿಸ್ತಾರವಾಗಿಯೂ ನಿರ್ಮಲೆಗೆ ವಿನಾಯಕರಾಯನು ತಿಳಿಸಿದನು. ಅದನ್ನು ಕೇಳಿ ನಿರ್ಮಲೆಗೆ ಸ್ವಲ್ಪ ಬೇಜಾರವಾಯಿತು.

**ನಿರ್ಮಲೆ.**—ಘಡಿಯಾರವನ್ನು ನೋಡಿ, ಹಾಗಾದರೆ ನೀವು ಹೋಗಬೇಕೋ ಹೇಗೆ?

**ವಿನಾಯಕರಾವ್** ಹೌದು. ಹೊರಟೇಬಿಟ್ಟೆನು. (ಕೈಯೊಳಗಿನ ಘಡಿಯಾರವನ್ನು ಜೇಬಿನ ಹಾಕುತ್ತಾ) ಅವಕಾಶವಿಲ್ಲ; ಇನ್ನೂ ನಾಲ್ಕು ದಿವಸ ವಸ್ತಿಮಾಡಬಹುದಿತ್ತು.

**ನಿರ್ಮಲೆ:**— ಪುನಃ ಎಂದು ಬರುತ್ತೀರಿ?

ಈ ಪ್ರಶ್ನೆಗೆ ಏನು ಉತ್ತರಬರುತ್ತದೆಂಬುದನ್ನು ನಿರ್ಮಲೆಯು ಮೊದಲೇ ಯೋಚಿಸಿದ್ದಳು. ಆದರೂ ಮನಸ್ಸ್ಥೈರ್ಯಕ್ಕೋಸ್ಕರ ಈ ರೀತಿ ವಿಚಾರಿಸಿದಳು.

**ವಿನಾಯಕರಾವ್:**— ಅದರ ವಿಚಾರ ಈಗ ಹೇಳಲು ಆಗುವದಿಲ್ಲ.

**ನಿರ್ಮಲೆ:**— ಹೀಗೋ? (ನಿರ್ಮಲೆಯ ಮುಖವು ನಿಸ್ತೇಜವಾಗಿತ್ತು.)

**ವಿನಾಯಕರಾವ್.** ಈಗಲೀ ಹೇಗೆ ಹೇಳಲಿ, ನೀನೇ ತಿಳಿದು ನೋಡು ?

**ನಿರ್ಮಲೆ** — ಅಯ್ಯಾ ತಿಳಿಯುವುದೇನು ? ಎಲ್ಲವನ್ನೂ ತಿಳಿದೂ ಆಯಿತು; ನೋಡಿದ್ದೂ ಆಯಿತು.

ಅವಳ ಬಾಯಿಂದ ಈ ಶಬ್ದಗಳು ಬಹಳ ರೋಷದಿಂದ ಹೊರಟವು. ತನ್ನ ರೂಪಿನಲ್ಲಿ ಉಂಟಾದ ವ್ಯತ್ಯಾಸವು ಅವಳ ಲಕ್ಷಕ್ಕೆ ಬಂದು ಈ ಮಾತುಗಳು ಹೊರಬಿದ್ದಿದ್ದವು. ಪರಮೇಶ್ವರನ ಲೀಲೆಯು ಬಹಳ ಅಗಾಧವಾದದ್ದು. ಮತ್ತು ವಿಚಿತ್ರವಾದದ್ದು ಇರುವದು. ಎಷ್ಟು ದೊಡ್ಡ ಕ್ರಾಂತಿಗಳನ್ನು ಕೇವಲ ಚಮತ್ಕಾರಿಕ ರೀತಿಯಿಂದ ಮಾಡಿಸಿ ಬಿಡುತ್ತಾನೆ. ಆವನ ಶಸ್ತ್ರಕ್ರಿಯೆಯು ಬಹಳ ನಾಜೂಕಾದದ್ದು! ನಿರ್ಮಲೆಯು ಎಷ್ಟು ಮರ್ಯಾದೆವಂತಳು. ಮತ್ತು ತನ್ನ ಸೌಂದರ್ಯದಬಗ್ಗೆ ಅವಳಿಗೆ ಎಷ್ಟು ಅಭಿಮಾನ. ಅವಳಿಗೆ ಜಗತ್ತೇ ಕಾಣದಂತಾಗಿತ್ತು. ವಿನಾಯಕನ ಮರ್ಮಭೇದಕ ಮಾತಿನಿಂದ ಅವಳಿಗೆ ಕಣ್ಣಿನಲ್ಲಿ ಅಂಜನ ಹಾಕಿದಂತೆ ಎಚ್ಚರಿಕೆಯಾಯಿತು.

**ವಿನಾಯಕರಾವ್:** ನಿರ್ಮಲೆ, ನಿನ್ನ ವಿಷಯದಲ್ಲಿ ನನಗೆ ಪೂರ್ಣ ಸಹಾನುಭೂತಿಯುಂಟು. ನನಗೆ ನಿನ್ನ ವಿಚಾರನೋಡಿ ಮನಸ್ಸಿಗೆ ಬಹಳ ಅಸಮಾಧಾನವಾಗುತ್ತದೆ. ಆದರೆ ಮಾಡತಕ್ಕದ್ದೇನು ? ಅದು ದೈವಲೀಲೆ !

ನಿರ್ಮಲೆಯು ಯಾವ ಮಾತನ್ನೂ ಆಡಲಿಲ್ಲ. ಅವಳ ಮನಸ್ಸಿನಲ್ಲಿ ತನ್ನ ಪೂರ್ವದ ಮತ್ತು ಈಗಿನ ಸ್ಥಿತಿಯಲ್ಲಿ ಆದ ಬದಲಾವಣೆಯ ತರ್ಕವು ನಡೆದಿತ್ತು.

**ವಿನಾಯಕರಾವ್:**— ಹುಚ್ಚೀ, ಮನುಷ್ಯನ ಶೋಭೆಯು ರೂಪದಿಂದ ಉಂಟಾಗಲಾರದು! ಆವನು ಗುಣದಿಂದ ಶೋಭೆಯುಳ್ಳವನಾಗುತ್ತಾನೆ!! ( ಮುಂದೆ ಮಾತೇ ಬರಲಿಲ್ಲ. ಹೇಗಾದರೂ ಮಾಡಿ ನಿರ್ಮಲೆಯನ್ನು ಸಮಾಧಾನಪಡಿಸಬೇಕಾಗಿತ್ತು. ಆ ಉಪಾಯವೇ ವಿನಾಯಕರಾಯನಿಗೆ ತೋರಲಿಲ್ಲ. ಆಕಸ್ಮಾತ್ ಹೇಳಿದ ಮಾತುಗಳೇ ಅವಳಿಗೇನೋ ಅವಂತೆ ಪರಿಣಮಿಸಿದವು. ಕಾರಣ ವಿಷಯವನ್ನು ಬದಲಿಸಿ) ನೊನ್ನೆ ದಿವಸದ ಪತ್ರಿಕೆಯನ್ನು ನೀನು ಓದಿರುವಿಯೋ ? ( ನಿರ್ಮಲೆಯು ವಿನಾಯಕನನ್ನು

ನೋಡುತ್ತಾ ಇದ್ದಳು.) ಸದ್ಗುಣವೇ ಸ್ತ್ರೀಯರಿಗೆ ನಿಜವಾದ ಅಲಂಕಾರವು! ಅದು ಕೊನೆವರೆಗೂ ಇರತಕ್ಕ ಆಭರಣ!! ಎಂದು ವಿನಾಯಕರಾಯನು ಪುನಃ ಹೇಳಿದನು

**ನಿರ್ಮಲೆ.**—ಇಷ್ಟು ಸಂದಿಗ್ಧವಾಗಿ ಏಕೆ ಹೇಳುತ್ತೀ? ನನ್ನ ಮೊದಲಿನ ರೂಪ ಈಗ ಇಲ್ಲವಾಗಿದೆ; ಮೋಹಕರೂಪವು ಮಾಯವಾಯಿತು; ಮುಖವು ವಿದ್ರೂಪವಾಗಿರುವುದನ್ನು ನಾನು ತಿಳಿದಿರುವೆನು. ಈ ಕಾರಣದಿಂದಲೇ ಮೊದಲಿನ ಇಷ್ಟಮಿತ್ರರು ಈಗ ಎಷ್ಟು ಕಾಗದ ಬರೆದರೂ ಬರುವದಿಲ್ಲ" ವೆಂದು ಹೇಳಲು.

**ವಿನಾಯಕರಾವ್** — ನೀನು ಬುದ್ಧಿಕುಶಲಳು. ನೀನೇ ವಿಚಾರ ಮಾಡಿ ನೋಡು. ಮನುಷ್ಯನಿಗೆ ರೂಪ, ಐಶ್ವರ್ಯಗಳು ಸ್ಥಿರವಲ್ಲ. ರೂಪವಂತರು ಕುರೂಪಿಗಳನ್ನು ಜರಿಯುವುದು ಒಳ್ಳೆಯದಲ್ಲ. (ನಿರ್ಮಲೆಗೆ ದುಃಖವಾಯಿತು) ನಿರ್ಮಲೆ, ಈಗ ನಿನ್ನ ಆಪತ್ತಿಗೆ ಯಾರೂ ಬರಲಾರರು. ನನಗೆ ಪತಿಯೇ ಮುಖ್ಯ ಸ್ನೇಹಿತನು. ಅವನ ವಿನಹ ಬೇರೆ ಯಾರೂ ಬರಲಾರರು. ಇದನ್ನು ಚೆನ್ನಾಗಿ ತಿಳಿದುಕೋ ತಿಳಿಯಿತೇ? ಆಗಲಿ, ವೆಂಕಟರಾಯರು ಈಗ ಎಲ್ಲಿರುವರು? ಅವರಿಗೆ ಕಾಹಿಲೆಯಾದ ಸಂಗತಿ ಗೊತ್ತಿದೆಯೋ? ನೀನು ಅವರಿಗೆ ತಿಳಿಸಿದಂತೆ ತೋರುವದಿಲ್ಲ. ಈಗಲಾದರೂ ಕಾಗದ ಬರೆದು ಅವರನ್ನು ಕರೆಸು.

**ನಿರ್ಮಲೆ.** — ಅವರು ಬಾರದಿದ್ದರೆ?

**ವಿನಾಯಕರಾವ್.** ಹಾಗೆಂದರೇನು? ನೀನು ಲಗ್ನಮಾಡಿಕೊಳ್ಳುವಾಗ ನಿನ್ನಿಂದ ಬಹಳ ಅಶಾಸ್ತ್ರೀಯವಾದ ಕ್ರಮಗಳು ನಡೆದಿರುತ್ತವೆಂದು ಜನರು ಆಡಿಕೊಳ್ಳುತ್ತಾರೆ. ನಾನು ಈ ರೀತಿ ಹೇಳಿದೆನೆಂದು ಸಿಟ್ಟಾಗಬೇಡ. ನಾನು ಹೊರಡುತ್ತೇನೆ. (ಎಂದು ಹೊರಟುಹೋಗಿಯೇ ಬಿಟ್ಟನು.)



# ೨೧ನೆಯ ಪರಿಚ್ಛೇದ.



## ದಿಕ್ಕು ತಪ್ಪುವಿಕೆ!

ವಿನಾಯಕನು ಹೋದೊಡನೆ ನಿರ್ಮಲೆಯು ತನ್ನ ಕೋಣೆಗೆ ಬಂದು, ಖುರ್ಚಿಯಮೇಲೆ ಕುಳಿತಳು. ಸೂರ್ಯದೇವನು ಆಗ ತಾನೆ ತನ್ನ ತಾಯಿಯ ಗರ್ಭವಲ್ಲಿ ಅಡಗಿದ್ದರಿಂದ ಕತ್ತಲೆಯು ಸಂದಿಗೊಂದಿಗಳಲ್ಲಿ ಪ್ರವೇಶಿಸಿದಳು. ಕಾರಣ ನಿರ್ಮಲೆಯು ಮೇಜಿನಮೇಲಿನ ಸಮೆಯವನ್ನು ಹಚ್ಚಿದಳು. ಆದರೆ ಆದರ ಪ್ರಕಾಶದಿಂದ ಅವಳಿಗೆ ಆನಂದವಾಗಲಿಲ್ಲ. ಕೂಡಲೇ ಡಿಟ್ ಮೋರ್ ದೀಪವನ್ನು ಹಚ್ಚಿದಳು. ಈಗಮಾತ್ರ ಮನಸ್ಸಿಗೆ ತಕ್ಕಷ್ಟು ಪ್ರಕಾಶವು ಕಾಣಹತ್ತಿತು. ತನ್ನ ಎರಡೂ ಕೈಗಳನ್ನು ಮೇಜಿನಮೇಲೆ ಊರಿ, ಎದುರಿಗಿರುವ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡಳು ವಿನಾಯಕನು ಹೇಳಿದಂತೆ ಮುಖದಲ್ಲಿ ಬದಲಾವಣೆಯಾಗಿದೆಯೋ ಹೇಗೆ ಎಂಬುದನ್ನು ಪರೀಕ್ಷಿಸಲು ಕನ್ನಡಿಯಲ್ಲಿ ಮುಖನೋಡಿಕೊಳ್ಳಬೇಕಾಯಿತು. ಮೊದಲು ಮುಖವನ್ನು ನೋಡಿಕೊಂಡಳು; ನಂತರ ಎದ್ದುನಿಂತು ಪೂರ್ತಿ ಶರೀರದ ಪ್ರತಿಬಿಂಬವನ್ನು ನೋಡಿದಳು. ಎಡಬಲಭಾಗಗಳನ್ನು ನೋಡಿಕೊಂಡಳು. ಅನೇಕ ವಿಧದಿಂದ ತನ್ನ ಪ್ರತಿಬಿಂಬವನ್ನು ಕನ್ನಡಿಯಲ್ಲಿ ಬಹಳ ಹೊತ್ತಿನವರೆಗೆ ನೋಡುತ್ತಾಯಿದ್ದಳು.

ಎಡಭಾಗದ, ಬಲಭಾಗದ, ಎದುರಿನ, ಹಿಂಭಾಗದ ಕಡೆಗಳಲ್ಲಿ ತೂಗಹಾಕಿದ ಕನ್ನಡಿಗಳಲ್ಲಿ ಪ್ರತಿಬಿಂಬವನ್ನು ನೋಡಿನೋಡಿ ಬೇಸತ್ತು ಆರಾಮ ಖುರ್ಚಿಯಮೇಲೆ ಒರಗಿಕೊಂಡಳು. ಆರೋಗ್ಯದಲ್ಲಿ ಮೊದಲಿನಂತೆ ಸದೃಢವಾಗಿದ್ದಳು. ಆದರೆ ಮನಸ್ಸು ಮಾತ್ರ ಮೊದಲಿನಂತೆ ಪ್ರಫುಲ್ಲವಾಗಿರಲಿಲ್ಲ. ಮನಸ್ಸಿನಲ್ಲಿ ಏನೋ ವಿಚಾರ ನಡೆದೇ ಇತ್ತು. ಅವಳು ಆತ್ಮನಿರೀಕ್ಷಣೆಯನ್ನು ಮಾಡುತ್ತ ಇದ್ದಳು. ಅವಳಿಗೆ ತನ್ನ ನಿಜವಾದ ಸ್ವರೂಪವು ಈಗ ತಿಳಿಯಲಾರಂಭಿಸಿತು. ಅವಳ ಪ್ರೇಮದಲ್ಲಿ ಅಂತಃಕರಣದ ಪ್ರಕಾಶವು ಬೀಳಲಾರಂಭಿಸಿತು. ಸಂಕಟಕಾಲದಲ್ಲಿಯೇ ಈ ಪ್ರಕಾಶವು ಕಾಣುವುದು. ಮೊದ

ಉಂಟಾಗುವುದು." ಎಂಬ ಕಲ್ಪನೆಯು ಅವಳಿಗೆ ಸರಿಯಾಗಿ ತಿಳಿದು, ವಿನಾಯಕನು ಹೇಳಿದಮಾತು ನಿಜವೆಂದು ನಂಬಿದಳು.

ಸನಾತನ ಪತ್ರಿಕೆಯ ಫೈಲಿನಲ್ಲಿಯ ಹಳೇಪತ್ರಿಕೆಯ ಕಡೆಗೆ ಅಕಸ್ಮಾತ್ತಾಗಿ ಅವಳ ಲಕ್ಷ್ಯವು ಹೋಯಿತು. ತನ್ನ ಲಗ್ನವಾಗುವ ಸಮಯ ದಲ್ಲಿ ತನಗಾಗಿ ಸನಾತನ ಪತ್ರಿಕೆಯಲ್ಲಿ ಬರೆದ ಲೇಖನದ ನೆನಪು ಬಂದಿತು. ಲಗ್ನವಾಗದೆ ಇರುವುದರಿಂದಲೇ ತನ್ನ ತಾಯಿ ಮರಣಪಟ್ಟಿದ್ದು ಈಗ ಅವಳಿಗೆ ತಿಳಿಯಿತು. ತಂದೆಯು ಮನೆಗೆ ಬರಲು ಬರೆದಪತ್ರಕ್ಕೆ ಸುಳ್ಳು, ನೆಪದ ಕಾಗದ ಬರೆದ ಜ್ಞಾಪಕವು ಬರಲಾರಂಭಿಸಿತು. ಸ್ವಾತಂತ್ರ್ಯತೆಯ ಹುಚ್ಚು ನನ್ನ ತಲೆಯಲ್ಲಿ ಸೇರಿದ್ದರಿಂದ ನನ್ನ ತಾಯಿ-ತಂದೆಗಳನ್ನು ಕಳೆದು ಕೊಂಡೆನು ಮತ್ತು ಅಭದ್ರವಾದ ನಡತೆಯಿಂದ ಅಪಹಾಸ್ಯಪಡುವ ಲಗ್ನಕ್ಕೆ ಈಡಾದೆನು. ಸನಾತನ ಪತ್ರಿಕೆಯನ್ನು ಓದಿದಮೇಲೆ ತನ್ನ ತಂದೆಯವರಿಗೆ ಈ ನವಸುಧಾರಣೆಯಲ್ಲಿ ಮನಸ್ಸು ತಪ್ಪಿದ್ದನ್ನು ನೆನಪಿಗೆ ತಂದುಕೊಂಡು, ಆಗ ಸನಾತನ ಪತ್ರಿಕೆಯಲ್ಲಿ ಲಗ್ನದ ವಿಚಾರದಲ್ಲಿ ಸ್ತ್ರೀ ಸ್ವಾತಂತ್ರ್ಯದ ವಿಷ ಯವಾಗಿ ಏನು ಬರೆದಿರುತ್ತಾರೆಂಬುದನ್ನು ಓದಲು ಅವಳು ಪತ್ರಿಕೆಯನ್ನು ಕೈಯಲ್ಲಿ ತೆಗೆದುಕೊಂಡು ಓದಲಾರಂಭಿಸಿದಳು.

"ಹೋದಸಾರೆ ನಾವು ಸಹಪಂಕ್ತಿಭೋಜನದ ವಿಚಾರವಾಗಿ ನಿರ್ಭಿಡೆ ಯಿಂದ ಚರ್ಚಿಸಿ ವಾಚಕಮಹಾಶಯರಿಗೆ ತಿಳಿಸಿರುತ್ತೇವೆ. ಈಗ ಸಧ್ಯದ ಸ್ತ್ರೀ ಶಿಕ್ಷಣದ ವಿಷಯವಾಗಿ ನಮ್ಮ ಅಭಿಪ್ರಾಯವನ್ನು ತಿಳಿಸಿರುತ್ತೇವೆ."

ಈ ವಿಷಯವು ಬಹಳ ಹಳೇದಿರುವುದು. ಆರ್ಯಮತಾನುಸಾರ ಈಗಿನ ಶಿಕ್ಷಣವಿಲ್ಲವಾಗಿರುವುದರಿಂದ ನಾವು ಅದನ್ನು ಸಮಾಜದ ಮುಂದೆ ಪುನಃ ಚರ್ಚೆಗಾಗಿ ತಂದಿರುತ್ತೇವೆ.

ವಿಷಯವನ್ನು ತಿಳಿಸುವ ಮೊದಲು ಕೆಲವು ಮಾತುಗಳನ್ನು ನಿಮಗೆ ಅರಿಕೆಮಾಡಿಕೊಳ್ಳುತ್ತೇವೆ. ಎಷ್ಟೋ ಸಂಗತಿಗಳು ಕೆಲವರಿಗೆ ಸುಲಭ, ಸಾದಾ ಮತ್ತು ಸ್ಪಷ್ಟವಾಗಿ ತೋರತಕ್ಕವು ನಮಗೆ ಕಷ್ಟವೂ ಗಂಭೀರವೂ ಮತ್ತು ಅಸ್ಪಷ್ಟವೂ ತೋರುತ್ತವೆ. ಸ್ತ್ರೀ ಶಿಕ್ಷಣದ ಪುರಸ್ಕರ್ತರು ಇದರಲ್ಲಿ ನಾವು ಸೂಚಿಸಿದ ವಿಷಯವು ಅನ್ಯಾಯವೂ ಅಪ್ರಯೋಜಕವೂ ಎಂದು ದೃಢ

ಪಡಿಸಿ ನಮ್ಮ ಅನುಮಾನವನ್ನು ದೂರಮಾಡಬಹುದಾಗಿ ನಮ್ರತೆಯಿಂದಲೇ ಬೇಡಿಕೊಳ್ಳುತ್ತೇವೆ.

ಶಿಕ್ಷಣವೆಂಬುದು ಒಂದು ಜಾದುವಿನಂತೆಯಿದೆ. ಪ್ರತಿಯೊಂದು ಸಮಾಜದ ಆಪತ್ತನ್ನು ಪರಿಹರಿಸುವ ರಾಮಬಾಣವು ಶಿಕ್ಷಣವೇ. ಶಿಕ್ಷಣದಿಂದ ದೂರವಿದ್ದು, ಯಾವ ಸಾಮಾಜಿಕ ವ್ಯವಹಾರವನ್ನು ನಡೆಸುವುದು ತುಂಬಾ ಕಠಿಣವು. ಇದಲ್ಲದೆ ಯಾವ ಕರಕಮಲವು ಮಗುವಿನ ತೊಟ್ಟಿಲನ್ನು ತೂಗುವುದೋ ಅದೇ ಹಸ್ತವು ಎಲ್ಲ ಜಗತ್ತನ್ನೂ ತೂಗುವದೆಂಬುದಕ್ಕೆ ನಮ್ಮ ಒಪ್ಪಿಗೆಯುಂಟು. ಆದರೆ ಪ್ರಕೃತ ಸ್ತ್ರೀಶಿಕ್ಷಣದ ವಿಷಯವನ್ನು ತತ್ವದೃಷ್ಟಿಯಿಂದ ಸೂಕ್ಷ್ಮವಾಗಿ ವಿಚಾರಮಾಡಿ ಇದುವರೆಗಿನ ಅನುಭವವನ್ನು ಆಲೋಕಿಸಿದರೆ ಅದರಿಂದ ಅಷ್ಟು ಪ್ರಯೋಜನವಾದಂತೆ ತೋರುವದಲ್ಲ.

ಈಗ ಸಿಗುತ್ತಿರುವ ಶಿಕ್ಷಣವು ನಮ್ಮ ಆರ್ಯಪದ್ಧತಿಯ ಪ್ರಕಾರ ಇಲ್ಲವೆ ಪಾಶ್ಚಾತ್ಯ ಪದ್ಧತಿಯ ಪ್ರಕಾರ ಇರುವದಿಲ್ಲ. ಅದು ಎರಡಕ್ಕೂ ಮಧ್ಯಮ ಮಾದರಿಯಲ್ಲಿ ನಡೆಯುತ್ತಿರುವುದು. ಪಾಶ್ಚಿಮಾತ್ಯರ ನಡೆ-ನುಡಿ ಮತ್ತು ಅಲ್ಲಿಯ ವಾತಾವರಣ ಸ್ವಾತಂತ್ರ್ಯಗಳೇ ಬೇರೆ. ನಮ್ಮ ಆರ್ಯಭೂಮಿಯ ನಡೆನುಡಿ ಸ್ವಾತಂತ್ರ್ಯತೆಗಳೇ ಬೇರೆಯಿರುವದರಿಂದ ಈಗಿನ ಶಿಕ್ಷಣದಲ್ಲಿ ಸರಿಯಾದ ಯಾವವಿಷಯಗಳೂ ಮನಸದಟ್ಟಾಗದೆ ಹೆಣ್ಣುಮಕ್ಕಳಿಗೆ ಕಲಿತವಿದ್ಯೆಯನ್ನು ವ್ಯವಹಾರದಲ್ಲಿ ಉಪಯೋಗಿಸಿಕೊಳ್ಳಲು ಅವಕಾಶ ದೊರೆಯುವುದಿಲ್ಲ.

ಈಗಿನ ಸ್ತ್ರೀಶಿಕ್ಷಣದಲ್ಲಿ ಮುಖ್ಯ ಲೋಪವೆಂದರೆ, ಅದರಲ್ಲಿ ಧರ್ಮ ಶಿಕ್ಷಣದ ಯೋಚನೆಯು ಪ್ರಾಯಶಃ ಇಲ್ಲ. ನೈತಿಕ ಶಿಕ್ಷಣದ ಕೆಲವು ಪಾಠಗಳಿರುತ್ತವೆ. ಮತ್ತು ಈ ಪಾಠಗಳು ಇಲ್ಲಿಯ ಸಮಾಜರಚನೆ ವ್ಯವಹಾರಕ್ಕನುಕೂಲವಾಗಿಯೇ ಬರೆದವುಗಳಾಗಿರುತ್ತವೆ. ಇಷ್ಟರಿಂದಬಾಲಕರಿಗೆ ಧರ್ಮದ ಜ್ಞಾನವಾಗಲಾರದು. ಮತ್ತು ಬಾಲ-ಬಾಲಿಕೆಯರಿಗೆ ಸ್ವಭಾಷೆಯ ಜ್ಞಾನವು ಸರಿಯಾಗಿ ಆಗುವುದಿಲ್ಲ. ಅಂದರೆ ಅವರಿಗೆ ಆಗಬೇಕಾದಷ್ಟು ಮಾತೃಭಾಷೆಯ ಜ್ಞಾನವಾಗುವುದಿಲ್ಲ.

ಮೇಲ್ಕಂಡ ಎರಡು ದೋಷಗಳು ಇರಲು ಕಾರಣಗಳೂ ಇವೆ. ಧರ್ಮ ಸಂಬಂಧದಲ್ಲಿ ಸರಕಾರದವರು ತಟಸ್ಥವೃತ್ತಿಯಿಂದ ಇರುವದರಿಂದ ಈಗಿನ

ಶಿಕ್ಷಣದಲ್ಲಿ ಧರ್ಮವಿಷಯ ತಿಳಿಸಲು ಆಗುವಂತಿಲ್ಲ. ಉಳಿದ ಖಾಸಗಿ ಸಂಸ್ಥೆಗಳು ಅಂದರೆ ಕಾಶಿಯ ಹಿಂದೂವಿಶ್ವವಿದ್ಯಾಲಯ ಮುಸಲ್ಮಾನರ ಅಲೀಗಡ ವಿಶ್ವವಿದ್ಯಾಲಯ ಇವುಗಳಲ್ಲಿ ನಡೆಯುವ ಶಿಕ್ಷಣ ಕ್ರಮವು ಸರಕಾರಕ್ಕೆ ಸಮ್ಮತವಿಲ್ಲ. ಅಲ್ಲದೆ ಯೋಗ್ಯ ಪುಸ್ತಕಗಳು ಮತ್ತು ಯೋಗ್ಯ ಶಿಕ್ಷಕರ ಅಭಾವದಿಂದ ಹಾಗು ನಮ್ಮ ಅನಾಸಕ್ತಿಯಿಂದ ಇಂಗ್ಲೀಷನ್ನು ಬಿಟ್ಟು ಉಳಿದ ವಿಷಯಗಳನ್ನು ದೇಶಭಾಷೆಗಳಲ್ಲಿ ಕಲಿಸುವ ಪದ್ಧತಿಯು ಇದುವರೆಗೂ ಪ್ರಚಾರಕ್ಕೆ ಬಂದಿರುವುದಿಲ್ಲ. ಎಲ್ಲ ವಿಷಯಗಳನ್ನು ಇಂಗ್ಲಿಷಿನಲ್ಲಿಯೇ ಹೇಳುತ್ತಿರುವುದರಿಂದ ಆ ಭಾಷೆಗೆ ಬಾಲಕರು ಹೆಚ್ಚು ಗಮನವನ್ನು ಕೊಡಬೇಕಾಗುವುದು. ಇದರಿಂದ ಮಾತೃಭಾಷೆಗೆ ಸಹಜವಾಗಿ ಲಕ್ಷ್ಯವಿಲ್ಲದೆ ಅದು ಕ್ಷೀಣವಾಗುತ್ತಲಿದೆ.

ಶಿಕ್ಷಣ ಪದ್ಧತಿಯ ಈ ಎರಡು ದೋಷಗಳು ಸರಕಾರದವರಿಂದಲೇ ಆಗಿವೆಯೆಂದು ಹೇಳಲಾಗದು. ನಮ್ಮ ಮೇಲೆಯೇ ಆ ಜವಾಬುದಾರಿಯು ಇರುವುದು. ಹೇಗೆಂದರೆ ಪ್ರತಿವರ್ಷವೂ ಸರಕಾರದವರಿಂದ ಪ್ರಕಟವಾಗುವ ಶಿಕ್ಷಣದ ವರದಿಗಳನ್ನು ಪರಿಶೀಲಿಸುವುದರಿಂದ ಮಾತೃಭಾಷೆಯಲ್ಲಿ ಕೆಲವು ವಿಷಯಗಳನ್ನು ತಿಳಿಸಲು ಸರಕಾರಕ್ಕೆ ಇಷ್ಟವಿರುವಂತೆ ತೋರುತ್ತದೆ. ಅದಕ್ಕೆ ಅನುಕೂಲವೂ ಇದೆ. ಆದರೆ ಪ್ರಜೆಗಳ ಬೇಡಿಕೆಯೇ ಜೋರಾಗಿರುವಂತೆ ತೋರುವುದಿಲ್ಲ. ಶಾಸ್ತ್ರೀಯ ವಿಷಯಗಳನ್ನು ಇಂಗ್ಲೀಷಿನಿಂದ ದೇಶಭಾಷೆಗೆ ತರ್ಜುಮೆಮಾಡಿ ಪಾಠಹೇಳುವ ಶಿಕ್ಷಕರ ಪಂಡಿತರು ಸಿಗುವುದು ದುರ್ಲಭ. ಆದುದರಿಂದ ಮಾತೃಭಾಷೆಯಲ್ಲಿ ನಮಗೆ ಎಷ್ಟು ಪ್ರೀತಿ ಗೌರವವು ಇರಬೇಕೋ ಅಷ್ಟಿಲ್ಲವೆಂದು ಎದೆತಟ್ಟಿ ಹೇಳಬಹುದು. ಕಾರಣ ಖಾಸಗಿ ಸ್ಕೂಲುಗಳಲ್ಲಿಯಾದರೂ ಕನ್ನಡನಾಡಿನ ಮೇಲ್ಮೆಗಾಗಿ ಮಾತೃಭಾಷೆಯಲ್ಲಿಯೇ ಎಲ್ಲ ವಿಷಯಗಳನ್ನು ಬೋಧಿಸಲು ಪ್ರಯತ್ನಪಟ್ಟಿದ್ದಾದರೆ ಮೇಲ್ಕಂಡ ದೋಷಗಳು ಕಡಿಮೆಯಾಗಬಹುದು.

ಸಧ್ಯದ ಸ್ತ್ರೀ ಶಿಕ್ಷಣದಲ್ಲಿ ಮೇಲೆ ಹೇಳಿದ ದೋಷಗಳಿರುವುದರಿಂದ ಅದರ ಪರಿಣಾಮವು ಬಾಲಿಕೆಯರಿಗೆ ಆಗದೆ ಹೇಗೆ ಬಿಟ್ಟೀತು!

"ಧರ್ಮವು ಶಿಕ್ಷಣದ ಆತ್ಮವಿರುತ್ತದೆ. ಆತ್ಮವು ಅಂತರಾತ್ಮವಿರುವುದು." ಹಿಂದುಸ್ಥಾನಕ್ಕೆ ಇದು ವಿಶೇಷವಾಗಿ ಲಾಗು ಇರುತ್ತದೆ.

ಕಾರಣ ವಿಚಾರಮಾಡಿ ನೋಡಿದರೆ ರಾಷ್ಟ್ರೀಯ ತತ್ತ್ವಕ್ಕನುಸಾರವಾಗಿ ಧರ್ಮಬುದ್ಧಿಯು ಈಶ್ವರನಿಂದಕೊಟ್ಟ ಶಾಶ್ವತವಾದ ವಸ್ತುವಿರುವುದು. ಕಾರಣ ಧರ್ಮವು ಶಿಕ್ಷಣದಲ್ಲಿ ಸೇರದಿದ್ದಲ್ಲಿ ಶಿಕ್ಷಣದಿಂದ ಮಾನವನಿಗೆ ಎಷ್ಟು ಪ್ರಯೋಜನವಾಗದೇಕೋ ಅಷ್ಟು ದೊರೆಯಲಾರದು. ಇದರಿಂದ ನಮ್ಮ ಪೂರ್ವಿಕರಲ್ಲಿ ಧರ್ಮದಲ್ಲಿದ್ದ ಪ್ರೀತಿಯು ಕಡಿಮೆಯಾಗುತ್ತಬರುತ್ತದೆ. ಧರ್ಮಶಾಸ್ತ್ರದಲ್ಲಿ ಹೇಳಿದ ನಿತ್ಯಕರ್ಮಗಳು ಕರ್ತವ್ಯದ ಮತ್ತು ಕರ್ಮದ ನೈತಿಕ ಪಾಪ ಪುಣ್ಯಗಳದೃಷ್ಟಿಯಿಂದ ಈಗ ನಡೆಯುತ್ತಿರಲ್ಲ. ಕೇವಲ ಬಾಹ್ಯಾಡಂಬರಕ್ಕೆ ಲೋಕೋಪಚಾರಕ್ಕೆ ಹೆದರಿ ಈ ಕೆಲಸಗಳು ನಡೆಯುತ್ತವೆ.

ಮಾತೃಭಾಷೆಯು ಸ್ವಲ್ಪ ಅನುಭವದೊಡನೆ ವಿದ್ಯಾರ್ಥಿಯು ಆಂಗ್ಲಭಾಷೆಯಲ್ಲಿ ಶಿಕ್ಷಣವು ನಮಗೆ ದೊರೆಯುತ್ತಿರುವುದರಿಂದ ಧರ್ಮವಿಷಯಗಳನ್ನು ತಿಳಿಯಲು ಅವಕಾಶವೇ ಇಲ್ಲವೆನ್ನಬಹುದು. ಇದರಿಂದ ಸ್ವಭಾಷೆಯ ಜ್ಞಾನವೂ ಸಂಪೂರ್ಣವಾಗಿ ಇಲ್ಲದಂತಾಗುವುದು.

ಭಾಷೆಯೆಂದರೆ ಮಾತಾಡುವ ಜನರ ಆಚಾರವಿಚಾರದ ಆದರ್ಶವು. ಸ್ವಭಾಷೆಯಜ್ಞಾನವು ಉಂಟಾಗದಿದ್ದರೆ ಆಚಾರವಿಚಾರಗಳು ಹೇಗೆ ಉಂಟಾಗುವವು? ಅದರಲ್ಲೂ ಬಾಲಕಿಯರಿಗೆ ಇಲ್ಲಿಯ ಸಂಸ್ಕೃತಿ ಮತ್ತು ನಡೆದ ಧರ್ಮಗಳು ತಿಳಿಯದೆ ವಿಪರೀತ ಕಲ್ಪನೆಗಳು ಉಂಟಾಗಿ ಪರಧರ್ಮದ ಪ್ರಭಾವವು ಅವರಲ್ಲಿ ಅಂಕುರಿಸುವುದು ಆಶ್ಚರ್ಯವಲ್ಲ.

ಕನ್ನಡ ಮಹಾಶಯರೇ ಮತ್ತು ಸ್ತ್ರೀಶಿಕ್ಷಣ ಪ್ರೋತ್ಸಾಹಕರೇ ನಿಮಗೆ ನನ್ನ ವಿನಂತಿ ಇಷ್ಟೆ. ಪ್ರಕೃತ ಸ್ತ್ರೀಶಿಕ್ಷಣದಲ್ಲಿ ಧರ್ಮ ಮತ್ತು ಗೃಹಕರ್ಮ ಶಿಕ್ಷಣವು ಕ್ರಮವಾಗಿ ನಡೆಯುತ್ತಿರುವದಿಲ್ಲವಾದ್ದರಿಂದ ಈಗಿನ ಕೆಲ ವಿದ್ಯಾರ್ಥಿನಿಯರು ದಾರಿತಪ್ಪಿ ಅಡವಿಯ ಪಾಲಾಗುತ್ತಾರೆ. ಕಾರಣ ಈ ದೋಷವನ್ನು ಸಮಾಜವು ಬೇಗನೇ ಕಳೆಯಲು ಪ್ರಯತ್ನಿಸುವುದು ಕನ್ನಡಿಗರ ಕರ್ತವ್ಯವು.

ವಾಚಕರಿಗೆ ಬಹಳ ಬೇಸರವಾಗಿರಬಹುದು, ಪ್ರಕೃತ ವಿಷಯದ ಕಡೆಗೆ ನಮ್ಮ ಗಮನವನ್ನು ತಿರುಗಿಸುವಾ.

ನಿರ್ಮಲೆಯು ಸನಾತನ ಪತ್ರಿಕೆಯಲ್ಲಿರುವ ಸ್ತ್ರೀ ಶಿಕ್ಷಣದ ವಿಚಾರವೆಲ್ಲವನ್ನು ಓದಿ, ತಾನು ದಾರೀತಪ್ಪಿ ನಡೆದಿರುವುದು ಅವಳಿಗೆ ಚೆನ್ನಾಗಿ ತಿಳಿಯಿತು ಮತ್ತು ತನ್ನಷ್ಟಕ್ಕೆ ತಾನೇತಾನು ದಾರೀತಪ್ಪಿದೆನು; ಎಂದು ನಿಟ್ಟುಸುರನ್ನು ಬಿಟ್ಟಳು.

---

# ೨೨ನೆಯ ಪರಿಚ್ಛೇದ.

## ಅತ್ಯಂತ ಪ್ರಿಯಸತಿ— ನಿರ್ಮಲೆ.

ನಿರ್ಮಲೆಯು ಬಹಳ ಹೊತ್ತಿನವರೆಗೆ ಸನಾತನ ಪತ್ರಿಕೆಯನ್ನು ನೋಡುತ್ತಿದ್ದಳು. ( ಮನಸ್ಸಿನಲ್ಲಿ ವಿಚಾರಮಾಡಿ ) ನನ್ನಿಂದ ಇದುವರೆಗೂ ಒಂದರಮೇಲೊಂದು ತಪ್ಪುಗಳು ಆಗುತ್ತಬಂದಿವೆ. ಇದಕ್ಕೆ ಪ್ರಾಯಶ್ಚಿತ್ತವಾಗಿ ಪತಿಯಲ್ಲಿ ಕ್ಷಮೆಯನ್ನು ಬೇಡುವುದು ಉತ್ತಮವೆಂದು ನಿಶ್ಚಯಿಸಿದಳು.

ಆದರೆ ಕ್ಷಮೆಯನ್ನು ಹೇಗೆ ಕೇಳುವುದು! ಮತ್ತು ಯಾವ ಮುಖದಿಂದ ಅವರನ್ನು ಮಾತಾಡಿಸುವುದು? ಎಂಬುದು ತಿಳಿಯದೆ ಪೇಚಾಡುತ್ತಿದ್ದಳು.

ಆದರೆ ಕ್ಷಮಾಪತ್ರವನ್ನು ಬರೆದು ಕಳುಹಿದರೆ ಅವರಿಗೆ ಅದರಲ್ಲಿ ನಂಬಿಕೆ ಹುಟ್ಟಬಹುದೇ? ಒಂದುವೇಳೆ ನಂಬಿಕೆ ಹುಟ್ಟಿದರೆ ಅವರು ನನ್ನನ್ನು ಕ್ಷಮಿಸಬಹುದೇ? ಹಿಂದೆನಡೆದ ಸಂಗತಿಗಳನ್ನು ಮರೆತು ಬಿಡಬಹುದೇ? ಈ ಪ್ರಕಾರವಾಗಿ ಅನೇಕ ಶಂಕೆಗಳು ಅವಳಲ್ಲಿ ಉಂಟಾಗಲಾರಂಭಿಸಿದವು. ಹೀಗೆ ಬಹಳ ಹೊತ್ತು ವಿಚಾರಮಾಡಿ ಕ್ಷಮೆ ಬರೆಯಲು ನಿಶ್ಚಯಮಾಡಿದಳು. ಪತ್ರವನ್ನು ಬರೆದು ಓದಿ ಪೂರ್ವದ ನನ್ನ ಸ್ಥಿತಿಗೂ ಈಗಿನ ಸ್ಥಿತಿಗೂ ಈ ಪತ್ರವು ವಿಪರೀತಕಲ್ಪನೆಯನ್ನು ತರಬಹುದೆಂದು ಅದನ್ನು ಹರಿದು ಚೆಲ್ಲಿದಳು. ಮತ್ತು ಒಮ್ಮೆಲೇ ಅತಿವಿನಯವನ್ನು ತೋರಿಸುವದಕ್ಕಿಂತಲೂ ಕ್ರಮಕ್ರಮವಾಗಿ ನಮ್ರತೆಯನ್ನು ತೋರಿಸಬೇಕೆಂದು ಯೋಚಿಸಿ ಈ ಕಾಗದವನ್ನು ಬರೆದಳು.

ಶ್ರೀ

ರಾಧಾಸದನ,
ಅಕ್ಟೋಬರ್ ೨೨.

**ಪ್ರಿಯಕರ ವೆಂಕಟರಾವ್,**

ನೀವು ಈ ಹಿಂದೆ ಬರೆದ ಎರಡು ಪತ್ರಕ್ಕೂ ನನ್ನಿಂದ ಉತ್ತರ ಬರೆಯಲು ಆಗಲಿಲ್ಲ. ಈ ರೀತಿ ಮಾಡಿರುವುದು ನನ್ನ ಜಂಬವನ್ನು ತೋರಿಸಿ

ಸುತ್ತದೆ. ಆದರೆ ಹಾಗೆ ಭಾವಿಸಬಾರದು. ನಾನು ಮದ್ರಾಸಿಗೆ ಹೋದಾಗ ಖಾಹಿಲೆ ಬಿದ್ದೆನು. ನನ್ನ ತಿಳವಳಿಕೆಯಲ್ಲಿ ಇದೇ ಪ್ರಥಮ ಖಾಹಿಲೆಯು. ಇಲ್ಲಿಗೆ ಬಂದನಂತರ ಈಗ ಸ್ವಲ್ಪ ಗುಣವಾಗಿರುತ್ತದೆ. ಆದರೆ ಇನ್ನೂ ಶಕ್ತಿ ಬಂದಿರುವುದಿಲ್ಲ; ಇಲ್ಲಿ ಸುಧಾರಿಸಿದ ಸಮಾಜವಿಲ್ಲ. ಮತ್ತು ಹೊತ್ತು ಕಳೆಯುವ ಯಾವ ಕೆಲಸವೂ ಇಲ್ಲ. ನನಗೆ ತುಂಬಾ ಬೇಜಾರು ಬಂದಿರುತ್ತದೆ. ಇಷ್ಟರೊಳಗೆ ನೀವು ಮದ್ರಾಸಿಗೆ ಬರುವ ಸಂಭವವಿದ್ದರೆ ಮೊದಲು ಇಲ್ಲಿಗೆ ಬನ್ನಿರಿ. ತಿಳಿಯಿತೆ! ಮನಸ್ಸಿನಲ್ಲಿ ಚೆನ್ನಾಗಿ ಜ್ಞಾಪಕವಿಟ್ಟುಕೊಳ್ಳಿರಿ. ಖಂಡಿತ ಬರುತ್ತೀರಾಗಿ ನಂಬಿರುತ್ತೇನೆ. ನೀವು ಇದುವರೆಗೂ ನನ್ನ ಇಷ್ಟಕ್ಕೆ ವಿರೋಧವಾಗಿ ನಡೆದಿಲ್ಲ. ನಿಮ್ಮ ಪತ್ರವು ಸಿಂಹಗಡದಿಂದ ಬಂದಿರುವುದರಿಂದ ಇದೂವರೆಗೆ ನೀವು ಆ ಸ್ಥಳದಲ್ಲಿಯೇ ಇರಬಹುದೆಂದು ಈ ಪತ್ರ ಬರೆದಿರುತ್ತೇನೆ.

ನಿಮ್ಮ,

**ನಿರ್ಮಲೆ.**

ತಾಜಾಕಲ್ಮ:— ಒಂದು ಮೋಟಾರು ತೆಗೆದುಕೊಳ್ಳಬೇಕೆಂದು ನನ್ನ ಮನಸ್ಸಿನಲ್ಲಿದೆ. ಮೋಟಾರಿನಲ್ಲಿ ತಿರುಗಾಡುವುದು ನಿಮಗೆ ಹೆಚ್ಚು ಒಗ್ಗುವುದಲ್ಲವೆ?

---

ಶ್ರೀ

ಗೇರಸಪ್ಪಾ ಜಲಪಾತ,
ನವೆಂಬರ್ ೫.

**ಪ್ರಿಯ ನಿರ್ಮಲೆ,**

ನಿಮ್ಮ ಪತ್ರ ತಲ್ಪಿತು. ನನ್ನ ಪತ್ರಕ್ಕೆ ಸರಿಯಾಗಿ ಜವಾಬು ಬರೆದಿದ್ದಕ್ಕೋಸ್ಕರ ನಿನಗೆ ನಾನು ಬಹಳ ಆಭಾರಿ ಇರುವೆನು. ಆದರೆ ನಿನ್ನ ಪತ್ರದ ಜವಾಬನ್ನು ನಾನು ಲಕ್ಷವಿಟ್ಟು ನೋಡುವದಿಲ್ಲೆಂಬುದು ನಿನಗೆ ಗೊತ್ತುಂಟು. ಪ್ರತಿ ಉತ್ತರ ಬರೆಯಲು ತಡವಾದುದಕ್ಕೆ ಕ್ಷಮಿಸಬೇಕು. ನಾನು ಜಲಪಾತ ನೋಡಲು ಸಿಂಹಗಡದಿಂದ ಇಲ್ಲಿಗೆ ಬಂದೆನು ಕಾರಣ

ಪತ್ರದೊರೆಯುವುದೇ ತಡವಾಯಿತು. ನಾನು ಇಲ್ಲಿಗೆ ಬಂದು ೧೦ ದಿವಸವಾಯಿತು. ನಿಮಗೆ ಖಾಹಿಲೆಯಾಗಿರುವುದೆಂದು ಕೇಳಿ ತುಂಬಾ ವ್ಯಥೆಯಾಗಿದೆ. ಖಾಹಿಲೆ ಯಾವುದು ? ಎಂಬುದನ್ನು ಬರೆದಿದ್ದರೆ ಚೆನ್ನಾಗಿತ್ತು. ಪ್ರಕೃತಿಸಿದ್ಧವಾದ, ಯೋಗ್ಯವಾದ ಹವೆಯು ರಾಧಾಸದನದಲ್ಲಿ ಯಥೇಷ್ಟ ದೊರೆಯುತ್ತದೆ. ಇದರಿಂದ ನಿಮಗೆ ಬೇಗನೆ ಶಕ್ತಿಬರುವುದು; ಸದ್ಯದಲ್ಲಿಯೇ ಅಲ್ಲಿಗೆ ಬರುವ ಸಂಭವವಿಲ್ಲ.

ನಿಮ್ಮ,

**ವೆಂಕಟರಾವ್.**

ತಾ. ಕ –ನೀವು ಮೋಟರು ತೆಗೆದುಕೊಳ್ಳುವುದು ನನಗೆ ಸಂತೋಷ. ಇದರಲ್ಲಿ ಕೂತು ಪ್ರಯಾಣಮಾಡಲು ಖಂಡಿತವಾಗಿಯೂ ನನಗೆ ಇಷ್ಟವಿಲ್ಲ; ಹೀಗೆ ಬರೆದೆನೆಂದು ಸಿಟ್ಟಾಗಬಾರದು.

---

ಶ್ರೀ

ರಾಧಾಸದನ,

ನವಂಬರ್ ೯ ಬೆಳಗಿನ ೮ ಘಂಟೆ.

**ಪ್ರಿಯಪತಿ ವೆಂಕಟರಾಯರೇ,**

ನಿಮ್ಮ ಉತ್ತರವು ನನ್ನನ್ನು ನಿರಾಶೆಯಾಗಿ ಮಾಡಿತು. ಅಲ್ಲಿಂದ ಇಲ್ಲಿಗೆ ಇಲ್ಲಿಂದ ಇನ್ನೊಂದುಕಡೆಗೆ ಹೀಗೆ ಊರೂರಿಗೆ ತಿರುತಿರುಗಿ ನಿಮಗೆ ಬೇಜಾರ ಬಂದಿರಬಹುದು, ಎಂದು ನಾನು ಭಾವಿಸಿದ್ದೆನು. ಆದರೆ, ಇಷ್ಟವಿರಲಿ ಇಲ್ಲವಿರಲಿ ನೀವು ಇಲ್ಲಿಗೆ ಬಂದೇ ತೀರಬೇಕಾಗಿ ನನ್ನ ಆಗ್ರಹದ ವಿನಂತಿ ಇದೆ. ನನಗೆ ಇಲ್ಲಿ ಬಹಳ ಬೇಜಾರಾಗಿದೆ ಮತ್ತು ಪೂರ್ತಿ ಖಾಹಿಲೆ ಗುಣವಾಗುವಂತೆ ತೋರುವುದಿಲ್ಲ. ಇಲ್ಲಿ ನಾನೊಬ್ಬಳೇ ಇರುತ್ತೇನೆ. ನೀವು ಬಂದನಂತರ ಬೇರೆಕಡೆ ಪ್ರಯಾಣ ಹೊರಡಬೇಕೆಂದು ನಿಶ್ಚಯಿಸಿರುತ್ತೇನೆ. ದಯವಿಟ್ಟು ಪತ್ರಕ್ಕೆ ಲಕ್ಷಗೊಟ್ಟು ಬರುವಿರಾಗಿ ನಂಬಿರುತ್ತೇನೆ. ನಿಮ್ಮ ಕೃಪೆಯು ನನ್ನ ಮೇಲೆ ಪೂರ್ಣವಿರಬೇಕು.

ನಿಮ್ಮ ಸ್ನೇಹದಲ್ಲಿ ನಿಲುಕಿದ,

**ನಿರ್ಮಲೆ.**

ಶ್ರೀ

ಶಿವನ ಸಮುದ್ರ, ನವಂಬರ ೨೯.

ಪ್ರಿಯ ನಿರ್ಮಲೆ,

ನಿನ್ನ ಪತ್ರ ಮುಟ್ಟುವದರೊಳಗೆ ನಾನು ಶಿವನಸಮುದ್ರಕ್ಕೆ ಬಂದದ್ದ ರಿಂದ ನಿನ್ನ ಪತ್ರ ತಲ್ಪುವುದು ವಿಲಂಬವಾಯಿತು. ನೀವು ಒಬ್ಬರೇ ರಾಧಾ ಸದನದಲ್ಲಿರುವುದಾಗಿಯೂ ಮತ್ತು ಕೇವಲ ಬೇಜಾರದಿಂದ ಇರುವಂತೆಯೂ ಪತ್ರದಿಂದ ತಿಳಿದು ಮನಸ್ಸಿಗೆ ದುಃಖವಾಗುತ್ತದೆ. ನೀವು ಒಬ್ಬರೇ ಏಕೆ? ತಮಾಷೆಯಾಗಿ ಮಾತಾಡಲು ಜನರು ಏಕೆ ಬರುತ್ತಿರುವದಿಲ್ಲ? ನೀವು ನೀಲ ಗಿರಿಯಲ್ಲಿರುವ ಕಾಲದಲ್ಲಿ ಎಷ್ಟೋ ಸ್ನೇಹಿತರು ನಿಮ್ಮಲ್ಲಿಗೆ ಬರುತ್ತಿದ್ದರು. ನನ್ನ ಹತ್ತಿರ ಒಂದು ಮಾತು ಸಹ ಆಡಲು ನಿಮಗೆ ಅವಕಾಶವಿರಲಿಲ್ಲ! ಈಗ ಮಾತ್ರ ಪ್ರಿಯದ ಮಿತ್ರನು ಕಾಲಕಳೆಯಲು ಬೇಕಾಯಿತೆ? ನಿನ್ನಲ್ಲಿ ಇಂಥ ಚಾಣಾಕ್ಷ್ಯತನವಿರುವುದು ನನಗೆ ಗೊತ್ತಿದೆ. ಸದ್ಯದಲ್ಲಿ ಅಲ್ಲಿಗೆ ಬರಲಾರೆ. ಇಲ್ಲಿಂದ ತಲಕಾವೇರಿ ಮಾರ್ಗವಾಗಿ ದಕ್ಷಿಣಕನ್ನಡದ ಸಮುದ್ರತೀರದಲ್ಲಿರುವ ಉಡುಪಿಗೆ ಹೋಗಬೇಕೆಂದು ನಿಶ್ಚಯಿಸಿರುತ್ತೇನೆ. ನಿಮಗೆ ಬೇರೆಕಡೆ ಪ್ರಯಾಣಮಾಡುವ ಮನಸಿದ್ದರೆ ಅವಶ್ಯಕವಾಗಿ ಹೋಗಬಹುದು. ಇದ ರಿಂದ ಪ್ರಕೃತಿ ಸುಧಾರಿಸಬಹುದು. ಪ್ರವಾಸಕಾಲದಲ್ಲಿ ನನ್ನನ್ನು ಸಂಗಾತಿ ಯವನನ್ನಾಗಿ ನೀವು ಅಪೇಕ್ಷಿಸಬಹುದು. ಆದರೆ ಜೊತೆಯ ಮನುಷ್ಯನಾಗಿ ನಾನು ಯಾರ ಸಂಗಡ ಹೋಗಲು ಇಚ್ಛಿಸುವುದಿಲ್ಲ. ಮತ್ತೆ ಹಾಗೆ ಹೋಗ ಕೂಡದೆಂದು ಮನಸ್ಸಿಗೆ ಗಟ್ಟಿಮಾಡಿರುತ್ತೇನೆ. ಈ ಬರವಣಿಗೆಯಿಂದ ನಿಮಗೆ ದುಃಖವಾಗಬಹುದು. ಆದರೆ ನಿಮ್ಮ ಮನಸ್ಸಿಗೆ ತಾಪವನ್ನುಂಟು ಮಾಡುವುದು ನನಗೆ ಇಷ್ಟವಿಲ್ಲ.

ಒಳ್ಳೇದು. ಖಾಹಿಲೆ ಎಂದು ಬರೆಯುತ್ತಿರಲಿಲ್ಲ! ಏನು-ಜ್ವರ ಬರುತ್ತಿದ್ದವೆ? ಅಥವಾ ಏನಾದರೂ ಮೈಮೇಲೆ ಎದ್ದಿದ್ದವೆ? ಏನಾಗಿತ್ತು? ಎಂಬುದನ್ನು ವಿವರವಾಗಿ ಬರೆದಿರುವುದಿಲ್ಲ. ಇವನ್ನು ದಯವಿಟ್ಟು ಬರೆಯಿರಿ. ಪ್ರೀತಿ ಪೂರ್ಣ ಇಚ್ಛಿರುತ್ತೇನೆ.

ನಿಮ್ಮ,
ವೆಂಕಟರಾವ್.

ಶ್ರೀ

ರಾಧಾಸದನ,
ಡಿಸೆಂಬರ್ ೧.

ಪ್ರಿಯಪತಿ ವೆಂಕಟರಾಯರ ಚರಣಸನ್ನಿಧಿಗೆ

ಯಾವದಾದರೂ ಕಾರಣದಿಂದ ನಿಮ್ಮನ್ನು ಇಲ್ಲಿಗೆ ಬರಮಾಡಿಕೊಳ್ಳುವುದೇ ನನ್ನ ಪತ್ರದ ಹೇತು ಕಾರಣ ನೀವು ಇಲ್ಲಿ ಬರಬೇಕಾಗಿ ಬೇಡುತ್ತೇನೆ. ನನ್ನ ಬರವಣಿಗೆಯು ನಿಮಗೆ ಆಶ್ಚರ್ಯವನ್ನುಂಟುಮಾಡಬಹುದು. ಮತ್ತು ಹಾಗೆ ತೋರುವುದು ಸಹಜವೆ? ಇದುವರೆಗೆ ನಿಮಗೆ ಆದ ಅನುಭವವು ಚೆನ್ನಾಗಿ ದೊರೆತಿರುವುದು. ಆದರೆ ಹಿಂದಿನ ನನ್ನ ತಪ್ಪನ್ನು ಕ್ಷಮಿಸಿ ಕೂಡಲೇ ಹೊರಟು ಬಂದು ನನಗೆ ಆನಂದವನ್ನುಂಟುಮಾಡುವಿರಾಗಿ ನಂಬಿರುತ್ತೇನೆ.

ಇಲ್ಲಿ ನಾನೊಬ್ಬಳೇ ಇರುವೆನು. ಮತ್ತೆ ಬಹಳ ಚಿಂತೆಯಿಂದ ನಿರ್ಬಲಳಾಗಿರುವೆನು. ನಾನು ಇದುವರೆಗೂ ತಪ್ಪನ್ನೇ ಮಾಡುತ್ತ ಬಂದಿರುವುದು ಈಗ ನನಗೆ ತಿಳಿಯುತ್ತಿದೆ. ನಿಮ್ಮ ಪತ್ರದ ಅಲಗುಗಳು ನನ್ನ ಎದೆಗೆನಾಟಿ, ತೂತನ್ನು ಮಾಡಿ, ಯಾತನೆ ಕೊಡುತ್ತಿವೆ! ಇದಕ್ಕೆ ಹೆಚ್ಚು ಬರೆಯ ಬಾರೆ. ನೀವು ವಿದ್ಯಾವಂತ ಸುಗುಣರಿರುತ್ತೀರಿ.

ನಿಮ್ಮ ಬರುವಿಕೆಯನ್ನೇ ಕಾಯುತ್ತಿರುವ,
ಅತ್ಯಂತ ಪ್ರೀಯ-ಪತ್ನಿ,
ನಿರ್ಮಲಾ

ತಾ. ಕ.-- ನನ್ನ ಖಾಯಿಲೆ ವಿಷಯ ಸಮಕ್ಷಮ ತಿಳಿಸುತ್ತೇನೆ.

---

ಆವಳ ಇಷ್ಟವಂತೆ ಪತ್ರದ ಪರಿಣಾಮವು ವೆಂಕಟರಾಯರಿಗೆ ಬಡಿದು, ಕೆಳಗಿನ ತಂತಿಯು ಮೂರು ದಿವಸಗಳಲ್ಲಿ ಬಂದು ತಲ್ಪಿತು.

**ನಿರ್ಮಲಾಬಾಯಿ**, ರಾಧಾಸದನ (ಮದ್ರಾಸಿನ ಹತ್ತಿರ.)
ಸದರ್ನ ಮರಾಠಾರೇಲ್ವೇ

ನಾಳೆ ಸಾಯಂಕಾಲ ೫ ಕ್ಕೆ ವೆಂಕಟರಾವ್ ಮನೆಗೆ ಹಾಜರು.

ವೆಂಕಟರಾಯರು ನಿರ್ಮಲೆಯ ಮನಸ್ಸು ತಿಳಿಯಲು ಈ ರೀತಿ ಪತ್ರ ವ್ಯವಹಾರ ಮಾಡಿದ್ದರು. ಎಷ್ಟಾದರೂ ಹೆಂಡತಿಯಲ್ಲಿ ಮನಸ್ಸು ಹೇಗೆ ತಡೆಯುವುದು. ಕೂಡಲೇ ಬರುವದಕ್ಕಿಂತ ಸ್ವಲ್ಪ ನಿಧಾನಿಸಿ ಬರುವುದು ಮನ್ನಣೆಗೆ ಯೋಗ್ಯವು.

ದೇವಿಯ ಪ್ರತಾಪದಿಂದ ನಿರ್ಮಲೆಯ ರೂಪವು ವಿಕಾರವಾಗಿರುವುದು ವಾಚಕರಿಗೆ ಗೊತ್ತಿದೆ. ಅದರ ಸಂಗಡ ಅವಳ ಅಹಂಭಾವ, ದೊಡ್ಡಸ್ತಿಕೆ, ನವನಾಗರಿಕತೆಯ ಥಳಕು, ಜಂಬ ಇವು ಎತ್ತಲೋ ಓಡಿಹೋಗಿದ್ದುವು.

ವೆಂಕಟರಾಯರು ರೈಲು ಹತ್ತಿ ರಾಧಾಸದನಕ್ಕೆ ಹೊರಟರು. (ಬರುವಾಗ ದಾರಿಯಲ್ಲಿ ಮನಸ್ಸಿನಲ್ಲಿ ವಿಚಾರ) ನಿರ್ಮಲೆಯ ಜಂಬ, ಸ್ವಪ್ರತಿಷ್ಠೆಗಳನ್ನು ನೋಡಿದರೆ ಅವಳಲ್ಲಿ ಹೋಗಲು ಮನಸ್ಸಾಗುವುದಿಲ್ಲ. ಆದರೆ ಕಾಗದ ನೋಡಿದರೆ ಮನಸ್ಸು ಕರಗುವುದು. ಈಗ ಪರಿಸ್ಥಿತಿ ಬದಲಾಯಿಸಿರಬಹುದು. ಎಂದು ಮನಸ್ಸಿಗೆ ಸಮಾಧಾನ ಮಾಡಿಕೊಂಡರು. ಅಷ್ಟರಲ್ಲೇ ರಾಧಾಸದನ ಸ್ಟೇಶನ್ ಬಂದಿತು. ತನ್ನನ್ನು ಎದುರುಗೊಳ್ಳಲು ನಿರ್ಮಲೆ ಬಂದಿರಬಹುದೆಂದು ಅವರು ಭಾವಿಸಿದ್ದರು. ಅವಳು ಬಾರದೆ ಒಬ್ಬ ಆಳನ್ನು ಸ್ಟೇಶನ್ನಿಗೆ ಕಳುಹಿಸಿಕೊಟ್ಟಿದ್ದಳು. ಆಳು ಬಂದುದನ್ನು ನೋಡಿ ಅವರಿಗೆ ಇದ್ದದರಲ್ಲಿ ಸ್ವಲ್ಪ ಆನಂದವಾಯಿತು. ನಾನು ಬರುವುದನ್ನೇ ನೋಡುತ್ತ ಬಾಗಿಲಲ್ಲಿ ಕೂತಿರಬಹುದಾಗಿ ಆಲೋಚಿಸಿ ಮನೆಗೆ ಹೋದರು. ಈ ಆಲೋಚನೆಯೂ ಸುಳ್ಳಾಯಿತು. ಮನೆಬಾಗಿಲನ್ನು ಮುಟ್ಟಿದೊಡನೆ ಬಾಯೀಸಾಹೇಬರು ನೆಟ್ಟಗಿದ್ದಾರೋ ಎಂದು ಕೇಳಲು, ಚಾರನು- ಹೌದು, ಆದರೆ ಸ್ವಲ್ಪ ತಲೆನೋವು, ಕೋಣೆಯಲ್ಲಿ ಮಲಗಿದ್ದಾರೆ, ಎಂದು ಹೇಳಿ ಅವರನ್ನು ಅಲ್ಲಿಗೆ ಕರೆದುಕೊಂಡು ಹೋದನು. ವೆಂಕಟರಾಯರು ನಿರುತ್ಸಾಹದಿಂದ ಕೋಣೆಗೆ ಹೋಗಿ ಒಂದು ಖುರ್ಚಿಯಮೇಲೆ ಕೂತರು. ಅಷ್ಟರಲ್ಲಿ ಆಳು ಫಲಾರ ತಂದುಕೊಟ್ಟನು. ಮತ್ತೊಬ್ಬನು ಬೀಸಣಿಗೆಯಿಂದ ಗಾಳಿ ಬೀಸಲಾರಂಭಿಸಿದನು. ಆದರೆ ನಿರ್ಮಲೆಯ ಮುಖದರ್ಶನ ಒಂದುಬಿಟ್ಟು ಎಲ್ಲ ಮರ್ಯಾದೆಗಳೂ ಯೋಗ್ಯವಾಗಿ ನಡೆದವು. ವೆಂಕಟರಾಯರಿಗೆ ಮುಖ್ಯವಾಗಿ ಅವಳನ್ನು ನೋಡದೆ ಮನಸ್ಸು ಸಮಾಧಾನವಾಗುವಂತಿರಲಿಲ್ಲ.

ವೆಂಕಟರಾಯರಿಗೆ ಸಮಾಧಾನವಾಗದೆ ಕೋಣೆಯಲ್ಲಿ ಅತ್ತಿಂದ ಇತ್ತ ಇತ್ತಿಂದ ಅತ್ತ ತಿರುಗಲಾರಂಭಿಸಿದರು. (ಮನಸ್ಸಿನಲ್ಲಿ) ಅವಳು ನನ್ನನ್ನು ಮೊದಲಿನಂತೆ ಅವಮಾನ ಮಾಡಲು ಪತ್ರ ಬರೆದಿರಬಹುದೆ? ನಾನು ಖಂಡಿತ ಬರಲಾರೆನೆಂದು ಒಮ್ಮೆ ಪತ್ರ ಬರೆದು ಈಗ ಅವಳ ಮೋಹಪಾಶಕ್ಕೆ ಮರುಳಾಗಿ ಏಕೆ ಬಂದಿರಬಹುದು? ಛೀ, ನನ್ನಂಥ ಹುಚ್ಚನು ಜಗತ್ತಿನಲ್ಲಿ ಬೇರೆ ಇರಲಿಕ್ಕಿಲ್ಲ; ಆಗಲಿ ಈಗಲೇ ತಿರುಗಿ ಹೋಗುವುದೇ ಉತ್ತಮ. (ಆದರೆ ಅವರು ಹೊರಟುಹೋಗಲಿಲ್ಲ.)

ಹೊರಗಡೆ ಕಾಲುನಡಿಗೆಯ ಶಬ್ದವು ವೆಂಕಟರಾಯರ ಕಿವಿಗೆ ಕೇಳಿಸಿತು. ನಡಿಗೆಯ ಶಬ್ದವನ್ನು ಕೇಳಿದೊಡನೆ ತಮ್ಮ ಆಲೋಚನೆಯನ್ನು ಬಿಟ್ಟು, ಬಾಗಿಲುಕಡೆ ನೋಡಲು ನಿರ್ಮಲೆಯು ಬಾಗಿಲನ್ನು ತೆಗೆದು ಒಳಕ್ಕೆ ಬಂದು ಬಾಗಿಲ ಮುಂಭಾಗದಲ್ಲಿಯೇ ನಿಂತು ಬಿಟ್ಟಳು. ವೆಂಕಟರಾಯರು ಅವಳನ್ನು ಎವೆ ಇಕ್ಕದೆ ನೋಡಲಾರಂಭಿಸಿದರು. ನಿರ್ಮಲೆಯು ಲಗ್ನದ ಕರಾರಿನ ದಿವಸ ಉಪಯೋಗಿಸಿದ ಸೀರೆಯನ್ನೇ ಈ ದಿವಸವೂ ಉಟ್ಟಿದ್ದಳು. ವೇಣೀಬಂಧನವೂ ಹಾವಭಾವವೂ ಮೊದಲಿನಂತೆಯೇ ಇದ್ದವು. ಇವನ್ನು ನೋಡಿದೊಡನೆ ವೆಂಕಟರಾಯರಿಗೆ ನೀಲಗಿರಿಯ ನೆನಪಾಯಿತು. ಹಿಂದೆನಡೆದ ಅನೇಕ ಸಂಗತಿಗಳು ಅವರಿಗೆ ಬರೋಬರಿಯಾಗಿ ನೆನಪಿಗೆ ಬರಲಾರಂಭಿಸಿದವು. ನಿರ್ಮಲೆಯು ಸ್ತಬ್ಧವಾಗಿ ಒಂದೇಸ್ಥಳದಲ್ಲಿ ಸುಮ್ಮನೆ ನಿಂತಳು. ಅವಳು ಅಷ್ಟು ಉತ್ಸಾಹಭರಿತಳಾಗಿರಲಿಲ್ಲವಾದ್ದರಿಂದಲೂ ಮೊದಲಿನ ಸೀರೆಯನ್ನೇ ಉಟ್ಟಿದ್ದರಿಂದಲೂ ಲಗ್ನದ ವಿಚಾರವಾಗಿ ಪುನಃ ಏನೋ ಮಾತಾಡಲು ನನ್ನನ್ನು ಬರಮಾಡಿಕೊಂಡಿರಬೇಕೆಂದು ವೆಂಕಟರಾಯರು ತಮ್ಮ ಮನದಲ್ಲಿಯೇ ಪೇಚಾಡುತ್ತಿದ್ದರು.

ಹೀಗೆ ಸಂಶಯವಾಗಿ ಮನಸ್ಸಿನಲ್ಲಿ ಪೇಚಾಡುವುದಕ್ಕಿಂತಲೂ ಪ್ರತ್ಯಕ್ಷ ಅದರ ಅನುಭವವನ್ನು ನೋಡಿ ಬಿಡುವುದೇ ಒಳ್ಳೆಯದೆಂದು ಆಲೋಚಿಸಿ; ನಿರ್ಮಲೆ, ಹೀಗೆ ಏಕೆ? ದೂರವಾಗಿರುವೆಯಲ್ಲ? ಮತ್ತೆ ನನಗೆ ಏತಕ್ಕೆ ಬರಮಾಡಿಕೊಂಡೆ? ಅದನ್ನು ಸ್ಪಷ್ಟವಾಗಿ ಹೇಳು. ಅದರಲ್ಲಿ ಮುಚ್ಚುಮರೆ ಬೇಡ, ನಿರ್ಭಯದಿಂದ ನಿನ್ನ ಅಭಿಪ್ರಾಯವನ್ನು ತಿಳಿಸು

**ನಿರ್ಮಲೆ:—** ಛೀ, ಛೀಳಿಯೋ! ಅದು ಎಲ್ಲಿಯೋ ಅಡಗಿದೆ! ಮತ್ತೆ ಮೊದಲಿನ ಪ್ರಸಂಗವು ಈಗ ಬರಲಾರದು. ಇದೋ ನನ್ನ ಮುಖವನ್ನು ನೋ.... ಎಂದು ಹೇಳುತ್ತ ಮೇಜಿನ ಸಮೀಪಕ್ಕೆ ಬಂದು ನಿಂತಳು. (ಅವಳ ನಡಿಗೆಯು ಕೇವಲ ನಿರಾಶೆಯ ನಡಿಗೆಯಂತಿತ್ತು. ) ಮೇಜಿನ ಮೇಲಿನ ದೀಪದಪ್ರಕಾಶವು ಮಂದವಾಗಿತ್ತು. ತಿರುಗಣೆಯಿಂದ ಅವಳು ತಿರುಗಿಸಿ ಅದರ ಪ್ರಕಾಶವನ್ನು ಹೆಚ್ಚುಮಾಡಿದಳು. ಪ್ರಕಾಶವು ನಿರ್ಮಲೆಯ ಮುಖದ ಮೇಲೆ ಬೀಳಲು ಅವಳ ಮುಖವನ್ನು ವೆಂಕಟರಾಯರು ಸರಿಯಾಗಿ ನೋಡಿದರು.

ಅವಳು ಮೆಲ್ಲಗೆ ಗದ್ಗದ ಸ್ವರದಿಂದ ಸಿಡಿಬು ಎದ್ದು ಹೋಗಾಯಿತೆಂದು ಹೇಳಿ, ಕಣ್ಣೀರು ಸುರಿಸುತ್ತ ಕಂಬದಂತೆ ನಿಂತುಬಿಟ್ಟಳು.

ವೆಂಕಟರಾಯರ ಮನಸ್ಸು ಕರಗಿತು. ಸ್ವಲ್ಪಹೊತ್ತು ಸುಮ್ಮನಿದ್ದು ಅವಳ ಕೈಯನ್ನು ಹಿಡಿದು ಸೌಮ್ಯತನದಿಂದ ಈ ವಿಷಯವನ್ನು ನನಗೇಕೆ ತಿಳಿಸಲಿಲ್ಲ?

**ನಿರ್ಮಲೆ:** ನೀವು ಬರಲಿಕ್ಕಿಲ್ಲವೆಂದು.

**ವೆಂಕಟರಾವ್:—** ಹಾಗೋ! (ಅವಳ ಮುಖವನ್ನು ನೋಡುತ್ತ ಕೈಯನ್ನು ದೂರಸರಿಸಿದರು. )

**ನಿರ್ಮಲೆ.** (ಮುಖತಗ್ಗಿಸಿ)-"ವಿನಾಯಕನು ಹಾಗೆ ತಿಳಿಸಿದ್ದನು."

**ವೆಂಕಟರಾವ್:—** (ಮುಖವು ಕ್ರೂರವಾಗಿ) ಹಾಗೆ ಹೇಳುವುದು ಅವನಿಗೆ ತಕ್ಕದ್ದು; ಅವನ ಕರ್ತವ್ಯವೂ ಅಷ್ಟೇ!

ನಿರ್ಮಲೆಯು ಯಾವ ಮಾತನ್ನೂ ಹೇಳದೆ ಹೆಚ್ಚುಹೆಚ್ಚಾಗಿ ಕಣ್ಣೀರನ್ನು ಸುರಿಸಲಾರಂಭಿಸಿದಳು. ಜಾಡ್ಯದಿಂದ ಅವಳು ಬಡವಾಗಿದ್ದಳು. ಅದರಲ್ಲೂ ಈಗ ಮುಖವು ತುಂಬಿರುವುದರಿಂದ ಅವಳನ್ನು ನೋಡಿದ ಎಂಥ ನಿಷ್ಠುರರಿಗೂ ದಯೆಬರುವಂತೆಯಾಗಿತ್ತು ಅದರಂತೆ ವೆಂಕಟರಾಯರಿಗೂ ದಯೆಹುಟ್ಟಿತು. ಅವರ ಮನಸ್ಸಿನ ಅನುಮಾನವು ಇಲ್ಲದಂತಾಗಿ ಅಂತಃಕರು

ಣವು ಉಕ್ಕೇರಿತು. ಅವಳ ಹೆಗಲಮೇಲೆ ತನ್ನ ಕೈಯನ್ನು ನೀಡಿ, ನಿರ್ಮಲೆ ನೀನು ಈರೀತಿ ಕಷ್ಟಪಡುವುದೇಕೆ? ನಾನು ನಿನಗೆ ಮಾಡತಕ್ಕದ್ದೇನು ಹೇಳು?

ಸ್ವಲ್ಪಹೊತ್ತು ನಿರ್ಮಲೆ ಮಾತಾಡಲಿಲ್ಲ. ( ಆಮೇಲೆ, ಗದ್ಗದ ಸ್ವರದಿಂದ) ನಾನು ಹತಭಾಗ್ಯಳು. ಇದರ ತಪ್ಪು ಯಾರಮೇಲೂ ಇಲ್ಲ: ನಾನೇ ದೋಷಿಯು; ಯಾರು ಏನು ಮಾಡತಕ್ಕದ್ದು; ದೈವಲೀಲೆ.

ವೆಂಕಟರಾಯರಿಗೆ ಇದೊಂದು ನಾಟಕದ ದೃಶ್ಯದಂತೆ ತೋರತೊಡಗಿತು. ಅವರು ಅವಳ ಮುಖವನ್ನೇ ನೋಡಲಾರಂಭಿಸಿದರು.

**ನಿರ್ಮಲೆ:—** ನಾನು ನಿ. .ಮ....ಗೆ ಏತಕ್ಕೋಸ್ಕರ ಕರೆಯಿಸಿದೆನೆಂಬುದು ನಿಮಗೆ ತಿಳಿಯಿತೇ ?

**ವೆಂಕಟರಾವ್ .—** ಇಲ್ಲ; ನನಗೆ ತಿಳಿಯಲಿಲ್ಲ. ನೀನು ಸ್ಪಷ್ಟವಾಗಿ ಯಾಕೆ ಹೇಳುವುದಿಲ್ಲ?

**ನಿರ್ಮಲೆ:—** ಸ್ಪಷ್ಟ ! ಹ್ಯಾಗೆ ಹೇಳಲಿ; ನನ್ನ ಬಾಯಿ ಬರಲೊಲ್ಲದು.

**ವೆಂಕಟರಾವ್ :** – ( ಸ್ವಲ್ಪ ಹೊತ್ತು ಸುಮ್ಮನಿದ್ದು ) ಹಾಗೋ ! ವೆಂಕಟರಾಯನು ಎರಡನೇಸಾರಿ ಎಂದಿಗೂ ಮೋಸಹೋಗತಕ್ಕವನಲ್ಲ ತಿಳಿಯಿತೋ?

(ನಿರ್ಮಲೆಯ ಕಣ್ಣಿನಿಂದ ನೀರು ಉದುರುತ್ತಲೇ ಇದ್ದವು.)

ಕಾರಣವನ್ನು ಪುನಹ ವೆಂಕಟರಾಯರು ಹೇಳಬೇಕೆಂದು ನಿರ್ಮಲೆಗೆ ತಿಳಿಸಿದರು.

**ನಿರ್ಮಲೆ :—** ( ಏನು ಹೇಳಬೇಕೆಂಬುದು ಅವಳಿಗೆ ತೋರಲಿಲ್ಲ. ಆದರೂ ಧೈರ್ಯತಾಳಿ, ನಾನು ಬಹಳ ಹತಭಾಗ್ಯಳು, ಮತ್ತು ಒಬ್ಬಂಟಿಗಳಾಗಿ ಬಹಳ ತೊಂದರೆ ಅನುಭವಿಸುತ್ತ ಇರುವೆನು. ನಾನು ಅಶಕ್ತಳಿರುವೆನು. ನೀವು ಇಲ್ಲಿಯೇ ಇದ್ದರೆ ನಾನು ಗುಣಹೊಂದಬಹುದು; ಮತ್ತೆ ಹವಾ ಬದಲಾಯಿಸಲು ಎಲ್ಲಿಗಾದರೂ ಹೋಗಬಹುದು. ಆದರೆ ನಾನೊ

ಬ್ಬಳೇ ಹೋಗಲಾರೆ; ನನ್ನ ಜೀವಕ್ಕೆ ನಾನು ತುಂಬಾ ಹೆದರಿಕೊಂಡಿರುತ್ತೇನೆ. ನಾನು ಈಗ ಏನು ಹೇಳುತ್ತಿರುವೆನೋ ಅದು ನನಗೆ ತಿಳಿಯದಾಗಿದೆ. ಒಟ್ಟಿನಲ್ಲಿ ನಾನು ದಾರೀತಪ್ಪಿ ನಡೆದೆನು; ನನ್ನನ್ನು ಕ್ಷಮಿಸಬೇಕು.

"ಕ್ಷಮಿಸಬೇಕು" ಎಂಬ ಶಬ್ದಗಳು ಹೇಗೆ ಹೊರಬಿದ್ದವೋ! ಅಷ್ಟರಲ್ಲಿಯೇ ಅವಳ ಮುಖವು ಬಾಡಿತು. ಮತ್ತೆ ಮುಖವನ್ನು ತಗ್ಗಿಸಿದಳು.

**ವೆಂಕಟರಾವ್** -(ಸ್ವಲ್ಪ ಹೊತ್ತು ಸುಮ್ಮನಿದ್ದು) ನಿನಗೆ ಜೊತೆಗಾರ ಜನ ಬೇಕಷ್ಟೆ? ಒಬ್ಬ ಪರಿಚಾರಿಕೆಯನ್ನು ಸಂಬಳಕ್ಕೆ ಇಟ್ಟುಕೊಂಡರಾಯಿತು. ಅಥವಾ ಪತಿಯು ಬೇಕೋ? ಎಂಬುವನ್ನು ಸರಿಯಾಗಿಹೇಳು?

**ನಿರ್ಮಲೆ**:—(ಧೈರ್ಯದಿಂದ) ಹೌದು. ಎರಡೂ ವಸ್ತುಗಳೂ ನನಗೆ ಬೇಕು. (ಎಂದು ನುಡಿದು ತಲೆ ಕೆಳಕ್ಕೆ ಮಾಡಿದಳು.)

**ವೆಂಕಟರಾವ್**:— ಹೀಗಿರುವುದೋ! (ಎಂದು ಹೇಳುತ್ತ ಖುರ್ಚಿಯನ್ನು ದಬ್ಬಿ, ಮುಂದಕ್ಕೆ ಸರಿದು, ನಿರ್ಮಲೆಯ ಮುಖದ ಸಮೀಪಕ್ಕೆ ಬರಲು ಅವರ ತುಟಿಗಳಿಂದ ಸಣ್ಣಶಬ್ದವು ಕೇಳಿಸಿತು.)

---

# ೨೩ ನೆಯ ಪರಿಚ್ಛೇದ

---

## ಸ್ವರ್ಗಸುಖ.

**ವೆಂಕಟರಾವ್** :— ನಿರ್ಮಲೆ ನಿನ್ನ ಮನಸ್ಸಿನ ಅಭಿಪ್ರಾಯವು ಒಮ್ಮಿಂದೊಮ್ಮೆ ಬದಲಾವಣೆಯಾಗಲು ಕಾರಣವೇನು ?

ಅಷ್ಟರಲ್ಲಿ ಊಟದ ವ್ಯವಸ್ಥೆಯಾಗಿರುವುದಾಗಿ ಆಳು ತಿಳಿಸಲು, ಇಬ್ಬರೂ ಸಂತೋಷದಿಂದ ಊಟಮಾಡಿ ಬಂದು, ತಾಂಬೂಲ ಹಾಕುತ್ತ ಕುಳಿತರು.

**ನಿರ್ಮಲೆ** ಮಾತನಾಡಲಾರಂಭಿಸಿದಳು. ಅನುಭವ. ಅದರಲ್ಲೂ ಸ್ವಂತ ಅನುಭವವು. ಒಬ್ಬ ಶಿಕ್ಷಕನಂತಿರುವುದು ಸ್ವಾನುಭವವಿಲ್ಲದ ತತ್ವಜ್ಞಾನವು ವ್ಯರ್ಥ. ಇಷ್ಟು ಮಾತಾಡುವುದರಲ್ಲಿ ಅವಳ ಕಣ್ಣಿನಿಂದ ನೀರು ಸುರಿಯಲಾರಂಭಿಸಿತು. ಶಿಶುವಿನಿಂದ ಅನೇಕ ಜನರ ಕಣ್ಣುಗಳು ತೋರಿಗಿರುತ್ತವೆ. ಆದರೆ ಅದರ ಮುಖಮುಖದಿಂದ ನನ್ನ ಕಣ್ಣುಗಳು ಪ್ರಕಾಶಮಾನವಾದವು.

**ವೆಂಕಟರಾವ್** — ಈ ಅಲ್ಪಕಾರ್ಯದಿಂದ ನಿನ್ನ ಮತ ಬದಲಾವಣೆಯಾದದ್ದು ತುಂಬಾ ಆಶ್ಚರ್ಯವೇನಿದೆ.

**ನಿರ್ಮಲೆ**:– ಈಶ್ವರಲೀಲಾ ! ಇದು ದೇವರ ಆಟ! ನೀವು ಚರಿತ್ರೆಯನ್ನು ಓದಿರುತ್ತೀರಿ. ಕೇವಲ ಕ್ಷುಲ್ಲಕ ಕಾರಣಗಳಿಂದ ಎಂಥೆಂಥ ಕ್ರಾಂತಿಗಳು ನಡೆದಿವೆ ನೋಡಿ. ( ಎಂದು ಹೇಳುತ್ತ ಸನಾತನ ಪತ್ರಿಕೆಯ ಫೈಲನ್ನು ವೆಂಕಟರಾಯರ ಕೈಯಲ್ಲಿ ಕೊಟ್ಟಳು.)

**ವೆಂಕಟರಾವ್**:— ಆಃ ! ( ಈ ಪತ್ರಿಕೆಯಿಂದಲೇ ಅವಳ ಮನಸ್ಸಿನ ಬದಲಾವಣೆಯಾಗಿರುವುದೆಂದು ವೆಂಕಟರಾಯರಿಗೆ ತಿಳಿದಿರಲಿಲ್ಲ. )

**ನಿರ್ಮಲೆ:**— ಸನಾತನ ಪತ್ರಿಕೆಯೊಳಗಿನ ಸ್ತ್ರೀಶಿಕ್ಷಣದ ಲೇಖಗಳನ್ನು ಓದಿದುದರಿಂದ ನನ್ನ ಮನಸ್ಸಿನ ಅಭಿಪ್ರಾಯಗಳು ಬದಲಾಯಿಸಿದವು. ನನ್ನ ತಂದೆಯವರಿಗೂ ಇವರಿಂದಲೇ ಜ್ಞಾನವಾಗಿ, ಕಮೀಟಿಯಿಂದ ದೂರಾಗಿದ್ದರು.

**ವೆಂಕಟರಾವ್:**— ಹಾಗಾದರೆ ನಾನೂ ಇವನ್ನು ಓದಬಹುದಲ್ಲವೆ? ( ಎಂದು ಹೇಳುತ್ತ ಫೈಲನ್ನು ತಿರುವಿಹಾಕಲು ಪ್ರಾರಂಭಿಸಿದರು. )

**ನಿರ್ಮಲೆ:**— ಸುಮ್ಮನೇ ಓದಿದರೆ ಪ್ರಯೋಜನವಿಲ್ಲ. ಅವನ್ನು ಮನನ ಮಾಡಿಕೊಳ್ಳಬೇಕು. ಇವರ ಮಹತ್ವವು ನನ್ನ ಲಗ್ನದ ಕಾಲಕ್ಕೆ ನಮ್ಮ ತಂದೆಯವರಿಗೆ ಚೆನ್ನಾಗಿ ತಿಳಿದಿತ್ತು. ( ಮುಂದೆ ಶಬ್ದವು ಬರಲಿಲ್ಲ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. )

ಈ ಕೃತ್ಯಗಳನ್ನೆಲ್ಲ ನಡೆದು ಈಗ ಎಂಟುವರ್ಷವಾಗಿ ಹೋಗಿತ್ತು. ವೆಂಕಟರಾಯರಿಗೆ ಯಂತ್ರದ ಶಾಲೆಯಿಂದ ೫ ಸಾವಿರ ರೂಪಾಯಿ ಸಿಕ್ಕಿದ್ದವು. ನಿರ್ಮಲೆಗೆ ಮೃತ್ಯುಪತ್ರದಿಂದ ಎಲ್ಲ ಆಸ್ತಿಯೂ ಅವಳಿಗೆ ಸೇರಿತ್ತು. ಇದರಿಂದ ಅವರಿಗೆ ತಿಂಗಳಿಗೆ ( ೪೦೦ ) ನಾಲ್ಕುನೂರು ರೂಪಾಯಿ ಬಡ್ಡಿಯು ಬರುತ್ತಿತ್ತು. ಕಾರಣ ಅವರಿಗೆ ಹಣದ ಕೊರತೆ ಇರಲಿಲ್ಲ.

ಸನಾತನ ಪತ್ರಿಕೆಯೊಳಗಿನ ಅಭಿಪ್ರಾಯಗಳು ಅವರ ಮನಸ್ಸಿಗೆ ಚೆನ್ನಾಗಿಅಂಟಿಕೊಂಡವು. ಆಗ ಗಂಡಹೆಂಡತಿಬ್ಬರೂ ದೇಶಸಂಚಾರ ಮಾಡುತ್ತ ತಮ್ಮ ಸಮಾಜವು ದಾರಿತಪ್ಪಿ, ಟೊಳ್ಳುಸುಧಾರಣೆಯ ಕಡೆಗೆ ಲಕ್ಷಕೊಡದೆ ಆತ್ಮೋನ್ನತಿ ಮಾಡಿಕೊಳ್ಳಬೇಕೆಂದು. ಉಪನ್ಯಾಸದ ಮೂಲಕವೂ ಪತ್ರಿಕೆಯ ಮೂಲಕವೂ ಜನರಿಗೆ ಬೋಧೆಮಾಡಲು ಪ್ರಾರಂಭಿಸಿ ಲೋಕಸೇವಾನಿರತರಾದರು.

ಅಷ್ಟರೊಳಗೆ ಅವರಿಗೆ ಒಂದು ಪುತ್ರರತ್ನವನ್ನು ಪರಮೇಶ್ವರನು ಅನುಗ್ರಹಿಸಿದನು. ಮಗುವಿನ ಬಾಲಲೀಲೆಯನ್ನು ನೋಡಿ ದಂಪತಿಗಳಿಬ್ಬರೂ ಒಬ್ಬರಮುಂದೊಬ್ಬರು ನಿಂತು ನಗುವುದನ್ನು ನೋಡಿ ಯಾರಿಗೆ ಸಂತೋಷವಾಗಲಿಕ್ಕಿಲ್ಲ! ನಿಜವಾಗಿಯೂ ಅವರಿಗೆ ಅದು ಸ್ವರ್ಗಸುಖವೇ ಅಲ್ಲವೆ?

ನಿಜವಾಗಿಯೂ ಅದು ಸ್ವರ್ಗಸುಖವೇಸರಿ; ಯಾಕೆಂದರೆ ಅನುರೂಪರಾಗಿ ಸತಿಪತಿಗಳು, ಸುಂದರವೂ ಚಟುವಟಿಕೆಯಾದ ಮಗು, ಬೇಕಷ್ಟು ಐಶ್ವರ್ಯ, ಅದರಲ್ಲೂ ಇಬ್ಬರೂ ವಿದ್ಯಾವಂತರು, ಇನ್ನೇನುಬೇಕು? ಇದು **ಭೂಲೋಕದ ಸ್ವರ್ಗಸುಖವಲ್ಲವೆ ?**

ವಾಚಕಮಹಾಶಯರೇ, ನಿರ್ಮಲೆಯಂತೆ ದಾರಿತಪ್ಪಿ ನಡೆದ ಸ್ತ್ರೀಯರು ಪುನಹ ಸಂತೋಷದಿಂದ ಸಂಸಾರದಲ್ಲಿ ಇರುವುದು ನಿಮಗೂ ಇಷ್ಟವಲ್ಲವೆ ! ಕಾರಣ ಈಶ್ವರನನ್ನು ಸ್ಮರಿಸಿ ನಾನು ನಿಮಗೆ ರಜಾ ಕೇಳಿಕೊಳ್ಳುತ್ತೇನೆ !

# ಸಂಪೂರ್ಣ.